# ಶ್ರೀರಾಮ

# ಪಾದುಕಾ ಪಟ್ಟಾಭಿಷೇಕ

— ಇದು —

ಜನೋದ್ಧಾರ, ಮಾತೃಬಂಧುವಿಮೋಚನ, ಕಬೀರದಾಸ,
ಶರಣಬಸವ, ವಿಷಮವಿವಾಹ, ವತ್ಸಲಾಹರಣ
ಇತ್ಯಾದಿ. ನಾಟಕಗ್ರಂಥಗಳ ಕರ್ತರಾದ

**ಗದಗ**

**ಶ್ರೀ ದತ್ತಾತ್ರೇಯ ಕರ್ನಾಟಕ ನಾಟಕ ಮಂಡಳಿಯ**

ವ್ಯವಸ್ಥಾಪಕ,

**ಸದಾಶಿವರಾವ್ ಗುರುನಾಥ ಗರೂಡ**

ಇವರಿಂದ ವಿರಚಿಸಲ್ಪಟ್ಟು ಪ್ರಚುರಗೊಳಿಸಲ್ಪಟ್ಟತು.

ಗದಗ,

**"ಮುನ್‌ಷಿ" ಪ್ರಿಂಟಿಂಗ ವರ್ಕ್ಸ್‌ದಲ್ಲಿ ಮುದ್ರಿಸಲ್ಪಟ್ಟಿತು.**

**೧೯೨೯.**



ಈ ಗ್ರಂಥವು ಗದಗಿನಲ್ಲಿರುವ ಮುನ್‌ಷಿ ಪ್ರಿಂಟಿಂಗ ವರ್ಕ್ಸದ ಮ್ಯಾನೇಜರರಾದ
“ ಎಸ್ ಎಮ್ ಮುನ್‌ಷಿ ” ಇವರಿಂದ ಮುದ್ರಿಸಲ್ಪಟ್ಟು, ಗ್ರಂಥಕರ್ತ
ರಾದ ಗದಗ ಶ್ರೀ ದತ್ತಾತ್ರೇಯ ಕರ್ನಾಟಕ ನಾಟಕ ಮಂಡಲಿಯ
ವ್ಯವಸ್ಥಾಪಕರಾದ ಸದಾಶಿವರಾವ್ ಗುರುನಾಥ ಗರೂಡ ಇವರಿಂದ
ಪ್ರಚುರಗೊಳಿಸಲ್ಪಟ್ಟಿತು



# ಪ್ರಸ್ತಾವನಾ.

ಭಗವಂತ ಕೃಪಾಕಟಾಕ್ಷದಿಂದ ಕರ್ನಾಟಕ ರಂಗಭೂಮಿಯ ದುಸ್ಥಿತಿಯು ಕ್ಷೀಣವಾಗುತ್ತಾ, ಊರ್ಜಿತಾವಸ್ಥೆಯ ಬಾಲಸೂರ್ಯನ ಕಿರಣಗಳು ಅಖಿಲ ಕರ್ನಾಟಕವಲಯದ ಮೇಲೆ ಮೂಡಹತ್ತಿ ಮಲಗಿದ್ದ ಕನ್ನಡನಾಡಿನ ನಾಟ್ಯಕಲೆಯನ್ನು ಎಚ್ಚರಗೊಳಿಸಿರುವುದು ಕನ್ನಡ ನಾಡಿನ ಭಾಗ್ಯೋದಯವೇ ಸರಿ ಇದಕ್ಕಾಗಿ ಕಾಯಾ, ವಾಚಾ, ಮನಸಾ ಪರಿಶ್ರಮಪಡುತ್ತಿರುವ **ಗದಗ ಶ್ರೀ ದತ್ತಾತ್ರೇಯ ನಾಟಕ ಮಂಡಲಿಯ** ವ್ಯವಸ್ಥಾಪಕರಾದ ನಮ್ಮ ಪ್ರಿಯಮಿತ್ರ ಶ್ರೀಯುತ **ಸದಾಶಿವರಾವ್ ಗುರುನಾಥ ಗರೂಡ,** “ಅಭಿನಯಕೇಸರಿ” ಇವರಿದಕ್ಕೆ ಮುಖ್ಯಕಾರಣರೆಂದರೆ ಅತಿಶಯೋಕ್ತಿಯಾಗದು

ಇವರು ಅನೇಕ ನಾಟಕಗಳನ್ನು ರಚಿಸಿ, ಕೃತಿಯಿಂದ ರಂಗಭೂಮಿಯ ಮೇಲೆ ತಂದು ಉತ್ತಮ ರೀತಿಯಲ್ಲಿ ಪ್ರದರ್ಶಿಸಿ, ಕರ್ನಾಟಕ ವಾಙ್ಮಯ ಸೇವೆಯನ್ನು ಮಾಡಿರುತ್ತಾರೆ ಪ್ರಕೃತದಲ್ಲಿ ಈ **ಶ್ರೀರಾಮ ಪಾದುಕಾಪಟ್ಟಾಭಿಷೇಕ** ನಾಟಕದ ಪ್ರಸ್ತಾವನೆಯನ್ನು ಬರೆಯುವ ಕೆಲಸವನ್ನು ನನಗೆ ವಹಿಸಿರುವುದಕ್ಕಾಗಿ ತುಂಬಾ ಸಂತೋಷಿತನಾಗಿದ್ದೇನೆ

ಈ ಹೊಸ ಮಾದರಿಯ ನಾಟಕವು ಇಪ್ಪತ್ತನೆಯ ಶತಮಾನವನ್ನನುಸರಿಸಿ, ನಿದ್ರಿಸುತ್ತಿರುವ ಜನಾಂಗವನ್ನು ಎಚ್ಚರಗೊಳಿಸಲು ತಕ್ಕಂತೆ ಬಹಳ ಉತ್ತಮರೀತಿಯಿಂದ ಬರೆಯಲ್ಪಟ್ಟಿದೆ ಕೈಕಯಾರಾಣಿಯು ತನ್ನ ಅಧಿಕಾರದ ದುರುಪಯೋಗ ಮಾಡಿಕೊಂಡು ದಶರಥನಂತಹ ಸಾಮ್ರಾಟನನ್ನು ವಶಮಾಡಿಕೊಂಡುದೂ ಮತ್ತು ತನ್ನ ಪರಿವಾರಗಣದ ಉಪಯೋಗಕ್ಕೋಸ್ಕರ ಪ್ರಜರ ಕೊರತೆಗಳ ಕಡೆಗೆ ಸಹ ಮನಗೊಡದೆ ಧಿಕ್ಕಾರಮಾಡಿ ಶ್ರೀರಾಮಚಂದ್ರನಂತಹ ಮಹಾನುಭಾವನನ್ನು ಅಡವಿಗೆ ಕಳಿಸಿ, ಜನಕ್ಷೋಭೆಯನ್ನೂ, ಪ್ರಜಾ ಅಹಿತವನ್ನೂ ಉಂಟುಮಾಡಿ ಕೋಸಲದೇಶಕ್ಕೆ ಹಾನಿತಟ್ಟಿಸಿದ ವಿಚಾರವೂ ರಸಿಕ ರೀತಿಯಲ್ಲಿ ಯೋಜನಮಾಡಲ್ಪಟ್ಟಿರುತ್ತದೆ

ಮಂಥರೆಯ ಕುತ್ಸಿತ ಬುದ್ಧಿಯಿಂದಲೂ, ತನ್ನ ಸಂತೋಷವೇ ಸಂತೋಷ ತನ್ನ ಅಧಿಕಾರವು ಮತ್ತಾರ ಕೈಗೂ ಹೋಗಬಾರದೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯಿಂದಲೂ ದೇಶಕ್ಕೆ ಉಂಟಾದ ಹಾನಿಯನ್ನೂ, ಪ್ರಜೆಗಳ ಅನುತಾಪಾದಿಗಳನ್ನೂ, ಬಹಳ ಸ್ಪಷ್ಟವಾಗಿ ಒಡಮೂಡಿಸಿದ್ದಾರೆ

ಮಹಾತ್ಮನಾದ ಶ್ರೀರಾಮಚಂದ್ರನು ಆರ್ಯಭೂಮಿಯ ಉದ್ಧಾರಾರ್ಥವಾಗಿ ಪಿತೃವಾಕ್ಯದಂತೆ ಅರಣ್ಯಕ್ಕೆ ತೆರಳಿ ಕಂದಮೂಲಗಳನ್ನು ಭಕ್ಷಿಸಿ ಶಾಂತಮಯವಾದ ಸ್ಥಿತಿಯಿಂದ ಅನೇಕ ಕಷ್ಟಗಳನ್ನು ಸಹಿಸಿ, ಅನೇಕ ಮಹಾನುಭಾವರಿಗೆ ಬೋಧನೆಯಲ್ಲಿಯೂ ಕೃತಿಯಲ್ಲಿಯೂ ಆದರ್ಶಪ್ರಾಯನಾಗಿರುವ ಭಾಗವು ಬಹಳ ರಮಣೀಯವಾಗಿ ತೆರಲ್ಪಟ್ಟಿದೆಯಲ್ಲದೆ ಈತನ ಪ್ರಜಾಕ್ಷೇಮಚಿಂತನೆಯೂ ತಕ್ಕ ರೀತಿಯಲ್ಲಿ ನಿರೂಪಿಸಲ್ಪಟ್ಟಿದೆ

ಭರತನ ಬಂಧುಪ್ರೇಮ—ಅಧಿಕಾರ ಮತ್ತು ರಾಜ್ಯ ತೃಷ್ಣಿತಳಾದ ತಾಯಿಯನ್ನು ಶುಚ್ಛಿಸಿ ಶ್ರೀರಾಮನಲ್ಲಿ ಅನುರಾಗಿಯಾಗಿ ಅವನಂತೆ ತಾನೂ ಕಷ್ಟನಷ್ಟಗಳಿಗೆ ಭಾಗಿಯಾಗಿ ತಾನೂ ಶಾಂತಿಮಯನಾಗಿ ರಾಮಚಂದ್ರನೇ ಕೋಸಲದೇಶದ ರಾಜನೆಂದು ನಿರ್ಧಾರಮಾಡಿ, ಕಡೆಗೆ ಅವನ ಪಾದುಕೆಗಳನ್ನು ತಂದು ಸಿಂಹಾಸನದ ಮೇಲೆ ಸ್ಥಾಪಿಸಿ, ರಾಜ್ಯಭಾರ ನಡೆಸಿದುದು ಲೋಕೋತ್ತರವಾದ ಬಂಧುಪ್ರೇಮವನ್ನು ಸೂಚಿಸುತ್ತದೆ

ಗುಹಕನು ಅಂಬಿಗನಾದರೂ ಅವನಲ್ಲಿ ಇರುವ ಶ್ರೀರಾಮಚಂದ್ರಭಕ್ತಿಯು ಅಧಿಕವಾದುದು ಶ್ರೀರಾಮನು ಉಚ್ಚನೀಚಭಾವಗಳನ್ನು ನೋಡದೆ, ಆ ಗುಹಕನ ಸೇವೆಯನ್ನು ಕೈಕೊಂಡು ಅವನನ್ನು ಉದ್ಧಾರಮಾಡಿದುದು ಬಹು ಉದಾರಮತವಾದಿತ್ವವನ್ನು ಸ್ಪಷ್ಟೀಕರಿಸುತ್ತವೆ

ವಾಲ್ಮೀಕಿ ರಾಮಾಯಣ, ಆನಂದರಾಮಾಯಣಗಳಲ್ಲಿಯ ಅನೇಕ ಸಂವಿಧಾನಗಳನ್ನು ಇದರಲ್ಲಿ ಕ್ರೋಢೀಕರಿಸಿ ಪೌರಾಣಿಕ ಕಾಲದ ಭಾಷಾದಿಗಳಿಂದ ನಾಟಕವನ್ನು ರಮಣೀಯವಾಗಿ ಮಾಡಿ, ಭಕ್ತಿ, ವಿರಕ್ತಿ, ಮಾತೃಭೂಮಿಯ ಸೇವೆಮಾಡತಕ್ಕ ವಿಧಾನ, ಪಿತೃವಾಕ್ಯ, ಪರಿಪಾಲನಾಕ್ರಮ, ಬಂಧುಪ್ರೇಮ ಮತ್ತು ನ್ಯಾಯಶೀಲತೆ ಇವು ಒಡಗೊಂಡಿರುವ ಈ ಶ್ರೀರಾಮಪಾದುಕಾ ಪಟ್ಟಾಭಿಷೇಕ ನಾಟಕವನ್ನು ರಚಿಸಿ, ಕರ್ನಾಟಕ ರಂಗಭೂಮಿಯ ಮೇಲೆ ತಂದು, ಕನ್ನಡಿಗರ ಕರ್ನಾಟಕ ನಾಟ್ಯಕಲೆಗೆ ನವಜೀವನವನ್ನು ತಂದುಕೊಟ್ಟಿರುವುದಕ್ಕಾಗಿ ಶ್ರೀಯುತ ಗರೂಡರವರಿಗೆ ಕನ್ನಡಿಗರು ಕೃತಜ್ಞರಾಗಿರಬೇಕಾಗಿದೆ

25-6-24
ಮುಕ್ಕಾಂ ಬೆಂಗಳೂರು

**ಜಯರಾಮಾಚಾರ್ಯ**
" ಕೀರ್ತನಕೇಸರಿ "

ಶ್ರೀ

ದತ್ತರಾಜ ಪ್ರಸನ್ನ.

# ಶ್ರೀ ರಾಮ ಪಾದುಕಾ ಪಟ್ಟಾಭಿಷೇಕ



## ದತ್ತಾತ್ರೇಯ ಮಂದಿರ.

( ಕುಮಾರಿಯರು ಮಂಗಳಾಚರಣೆಯನ್ನಾಡುವರು. ಅರ್ಚಕನು ಸಕಲರಿಗೂ ಪ್ರಸಾದವನ್ನು ಕೊಡುವಷ್ಟರಲ್ಲಿ )

**ದೂತ**—ಬಾಲಕಿಯರೇ ಬಾಲಕಿಯರೇ, ಹಾದಿಬಿಡಿ, ಹಾದಿಬಿಡಿ, ಸುಮಂತ ಮಹಾರಾಜರ ಶುಭಾಗಮನವಾಗುತ್ತಲಿದೆ.

**ಅರ್ಚಕ**-ನಿಜವೇ ! ಯಾವನೋ ಒಂದು ರಾಜಕಾರಣಕ್ಕಾಗಿ ದಯಮಾಡಿ ಸುತ್ತಿರುವಿರಂದು ಕಾಣುತ್ತೆ. ಉಳಿದ ಮಂತ್ರಿ ಮಂಡಲವಾದರೂ ಸಂಗಡವೇ ಇದೆ ಹೂಂ! ಬಾಲಕಿಯರೇ, ತೀವ್ರ ತೆರೆಯಾಗಿ ತೆರೆಯಾಗಿ - ಅದೋ ಬಂದೇಬಿಟ್ಟರು ( ಒರುವರು. )

**ಸುಮಂತ**-ಶುಭದಿನವೆಂದರೆ ಇದೇ ರಾಜನಿಷ್ಠರಾದ ನನ್ನ ಸಹಕಾರಿಗಳೇ, ಭಗವಾನ್ ವಷಿಷ್ಟ ಮಹಾಮುನಿಗಳಿಗೆ ಈ ರಾಮ ಪಟ್ಟಾಭಿಷೇಕದ ಆನಂದ ಸಂದೇಶವನ್ನರುಹಿ ಅವರನ್ನು ಕರೆದುಕೊಂಡು ಬರುವಷ್ಟರಲ್ಲಿ ನೀವೆಲ್ಲರೂ ಪರಸ್ಪರ ಸಹಾಯಕರಾಗಿ ಸಕಲ ಸಿದ್ಧತೆಯನ್ನು ಮಾಡಿರಿ.

**ಅರ್ಚಕ**-ಮಹಾರಾಜರೇ, ಶ್ರೀರಾಮಚಂದ್ರಮಹಾರಾಜರಿಗೆ ಪಟ್ಟಾಭಿಷೇಕವಾಗುವುದೇ ?

**ಸಕಲರೂ**–ಅಹುದು ಸ್ವಾಮಿ

**ಸುಮಂತ**–ಅದಕ್ಕಾಗಿಯೇ ಶ್ರೀ ದತ್ತರಾಜನ ದರ್ಶನವನ್ನು ಕೊಂಡು ಭಗವಾನ್ ವಶಿಷ್ಟಮಹಾನುಭಾವರನ್ನು ಕರೆತರುವುದಕ್ಕಾಗಿ ರಾಜಾಜ್ಞೆಯಿಂದ ನಾನೇ ಹೋಗುತ್ತಿರುವೆನು ಇದೋ ಅರ್ಚಕರೇ,ಶ್ರೀ ದತ್ತದೇವನ ತ್ರಿಕಾಲಪೂಜೆಯು ಯಥಾಸಾಂಗವಾಗಿ ಜರಗುತ್ತಿರಲಿ ಈತನ ಅನುಗ್ರಹದಿಂದಲೇ ನಮ್ಮ ಸಕಲ ಮನೋರಥಗಳು ಪೂರ್ಣವಾಗತಕ್ಕವಿವೆ.

**ಸಕಲರೂ**-ನಿಸ್ಸಂದೇಹ, ನಿಸ್ಸಂದೇಹ.

**ಅರ್ಚಕ**-ಸುಮಂತಮಹಾರಾಜರೇ, ಅದರಲ್ಲಿ ಕಿಂಚಿನ್ಮಾತ್ರವಾದರೂ ನ್ಯೂನತೆಯಾಗದು, ಚಿಂತಿಸಬೇಡಿ ಶ್ರೀದೇವರಿಗಾರತಿಯನ್ನು ಮಾಡಲೋ?

**ಸುಮಂತ**-ಅಹುದು, ಆರತಿಯನ್ನು ಮಾಡಿ ಪ್ರಸಾದವನ್ನು ಕೊಟ್ಟು ನಮಗೆ ಶುಭಕಾರ್ಯಕ್ಕಾಗಿ ಅಪ್ಪಣೆಯನ್ನು ದಯಪಾಲಿಸಿರಿ.

**ಅರ್ಚಕ**-ತಥಾಸ್ತು, ತಥಾಸ್ತು ( ಆರತಿ ಬೆಳಗಿ ಪ್ರಸಾದ ಕೊಡುವನು )

**ಸಕಲರೂ**-

( ॥ಚಾಲ್॥ ಲಲನಾಲಂಕರಣವಸನಾ॥ )

ಸದಯಾಕಾಯೊಗುರುರಾಯಾ । ವಾಸವವಿನುತಾಭೋಃಶುಭಕಾಯ ॥
ಸದುಭುಕುತಾಳಿಗ । ಅಭಿವಾನಿಯುತವ । ಪಾದವೇಗತಿ ಶ್ರೀ ಪಾಪಪರಿಹೋ ॥

**ಸುಮಂತ**–ನೀವೆಲ್ಲರೂ ನಿಲ್ಲಿರಿ. ಸಾರಥಿಯೇ ಭಗವಾನ್ ವಶಿಷ್ಟಮಹಾಮುನಿಗಳ ಪುಣ್ಯಾಶ್ರಮದ ಕಡೆಗೆ ರಥವನ್ನು ನಡೆಸು.

**ಎಲ್ಲರೂ**–ಮಹದಾಜ್ಞಾ. ( ಹೋಗುವರು )

**ಅರ್ಚಕ**–ನಾವಾದರೂ ಇಲ್ಲಿ ಏತಕ್ಕೆ ನಿಲ್ಲಬೇಕು. ಪ್ರಾತರಾರ್ಚನೆಯಂತೂ ಮುಗಿಯಿತು; ಮನೆಗೆ ಹೋಗುವಾ. ( ದೇವಾಲಯದ ಬಾಕಿಲ ವನ್ನಿಕ್ಕಿ ಬೀಗಹಾಕುವಾಗ್ಗೆ )

**ಮಾಲತಿ**-(ಲಗುಬಗೆಯಿಂದ ಬಂದು) ಸ್ವಾಮಿೂ ಸ್ವಾಮಿೂ, ಪೂಜಾರ್ಯರೇ ನಿಲ್ಲಿ ನಿಲ್ಲಿ, ಬಾಕಿಲವನ್ನಿಕ್ಕಬೇಡಿ

**ಅರ್ಚಕ**-ಅದೇಕೆ ? ಪ್ರಾತರಾರ್ಚನೆಯಂತೂ ಮುಗಿದುಹೋಗಿದೆ.

**ಮಾಲತಿ**–ಮಂಥರಾಬಾಯಿಯವರು ಬರುತ್ತಿರುವರು.

**ಅರ್ಚಕ**-ಬಂದರೆ ಈ ಕಿಂಡಿಯೊಳಗಿನಿಂದ ಸ್ವಾಮಿಯ ದರ್ಶನವನ್ನು ತೆಗೆದುಕೊಳ್ಳಲಿ ಬೇಕಾದರೆ.

**ಮಾಲತಿ**–ಏನು ? ಶ್ರೀಮತೀ ಕೈಕಯಾದೇವಿಯವರ ಪ್ರೀತಿಯ ದಾಸೀ ಜನಗಳ ವಿಷಯದಲ್ಲಿ ಇಷ್ಟು ಅನಾದರವೇ ?

**ಅರ್ಚಕ**–ನಿಮಗೆ ದೇವಸ್ಥಾನಗಳಲ್ಲಿ ಕೂಡಾ ಆದರೋಪಚಾರಗಳು ಬೇಕಾಗುತ್ತಲಿರುವವಲ್ಲವೇ ? ಒಳ್ಳೇ ಲೆಕ್ಕಾಚಾರ ! ಇರಲಿ, ನನಗವಕಾಶ ವಿಲ್ಲ. ಯಾವಾಗಲೂ ದೇವಾಲಯವನ್ನು ಹಿಡಿದುಕೊಂಡು ಕುಳಿತರ ಗೃಹಕೃತ್ಯಗಳನ್ನಾರು ಮಾಡಬೇಕು ! (ಆತುರದಿಂದ ಹೋಗುವನು, ಮಂಥರೆ ಬರುವಳು. )

**ಮಂಥರೆ**-ಮಾಲತೀ, ಅದೇನು, ಪೂಜಾರ್ಯನು ಹೋಗುತ್ತಲಿರುವನು ? ನಿಲ್ಲಲಿಕ್ಕೆ ಹೇಳಲಿಲ್ಲನೇ ?

**ಮಾಲತಿ**–ಹೇಳಿದೆನು; ಅವನು ಕೇಳಲಿಲ್ಲ.

**ಮಂಥರೆ**–ಹೀಗೋ ! ಪರವಿಲ್ಲ, ನೋಡಿಕೊಳ್ಳುವೆನು. ಈ ರಾಮ ಪಕ್ಷದ

ಜನವು ರಾಮನಿಗೆ ಪಟ್ಟವಾಗುವುದೆಂದು ಮನಸ್ಸಿನಲ್ಲಿ ಮಂಡಿಗೆಯನ್ನು ತಿನ್ನುತ್ತಾ ನಮ್ಮ ವಿಷಯದಲ್ಲಿ ಹೀಗೆ ಮಾಡುತ್ತಿರಬಹುದು. ಆದರೆ ಎಲ್ಲೈ ಮೂರ್ಖಜನವೇ, ಅದು ನಿಮ್ಮ ಭ್ರಮವಿದೆ. ಈ ರಾಮನು ರಾಜನಾಗುವನೇ ? ನಮ್ಮ ಕೈಯೊಳಗಿನ ಬೊಂಬೆಯಾದ ದಶರಥರಾಜನು ಅವನಿಗೆ ರಾಜ್ಯಪದವನ್ನು ಕೊಡುವನೆ ?

**ಮಾಲತಿ**-ಮಂಥರೇ, ದಶರಥರಾಜರು ರಾಮಪಟ್ಟಾಭಿಷೇಕದ ಸಲುವಾಗಿ ಅಪ್ಪಣೆಯನ್ನು ನಿನ್ನೆ ಸಾಯಂಕಾಲದಲ್ಲಿಯೇ ಕೊಟ್ಟಾಯಿತೆಂದು ಕಂಚುಕಿಯು ಹೇಳುತ್ತಿದ್ದನಲ್ಲವೇ ?

**ಮಂಥರೆ**-ಏನು ಅಪ್ಪಣೆಯನ್ನು ಕೊಟ್ಟಿರುವನೇ ?

**ಮಾಲತಿ**-ಅಹುದಹುದು ! ಮತ್ತು ಅಪ್ಪಣೆಯನ್ನು ಕೊಡುವದಲ್ಲದೆ ಆದಷ್ಟು ತೀವ್ರ ಪಟ್ಟಾಭಿಷೇಕವನ್ನು ಮಾಡಿಸುವುದರ ಸಲುವಾಗಿ ರಾಜಗುರುಗಳಾದ ವಶಿಷ್ಟರನ್ನು ಕರೆತರುವುದಕ್ಕಾಗಿ ಸುಮಂತ ಪ್ರಧಾನರನ್ನು ಕಳುಹಿಸಿರುವರಂತೆ.

**ಮಂಥರೆ**-ಈಗ ಪ್ರಯಾಣ ಸನ್ನದ್ಧನಾಗಿ ಸುಮಂತನು ಅರಮನೆಯಿಂದ ಹೊರಬಿದ್ದದ್ದು ವಶಿಷ್ಟರನ್ನು ಕರೆತರುವುದಕ್ಕಾಗಿರಬಹುದೇನು ?

**ಮಾಲತಿ**-ಇದ್ದರೂ ಇರಬಹುದು ನೋಡು. ಇರಲಿ ಮಂಥರೇ, ರಾಮಭದ್ರನು ಪಟ್ಟವನ್ನೇರಿದ ಮೇಲೆ ಕೈಕಯಾರಾಣಿಯವರ ಕಾರಭಾರವು ಅಷ್ಟೇನೂ ನಡಿಯಲಿಕ್ಕಿಲ್ಲ. ಕೌಸಲ್ಯಾದೇವಿಯವರಿಗೆ ಇವರು ತಲೆಬಾಗಿ ನಡಿಯಬೇಕಾದೀತು. ಆಮೇಲೆ ನಾವು ಕೂಡ ಆ ಕೌಸಲ್ಯಾದೇವಿಯವರ ದಾಸದಾಸಿಯರಿಗೆ ವಿಧೇಯರಾಗಿ ವರ್ತಿಸಬೇಕಾದೀತು. ಇಷ್ಟು ದಿನಗಳ ತನಕ ನಿರ್ಬಂಧವಾಗಿ ಅವರ ಮೇಲಧಿಕಾರವನ್ನು ನಡೆಸಿದ ನಾವು ತಿರುಗಿ ಅವರಿಗೇನೆ ಬಾಗಬೇಕಾಗುವದಲ್ಲ. ಛೀ! ಛೀ!!

ಅಂಥ ಸಮಯವು ಬರತಕ್ಕದಿದ್ದರೆ ನಾನು ಈ ಸೇವೆಯನ್ನೇ ಬಿಟ್ಟು ಕೊಡುವೆನು. ಹೂವು ಮಾರಿದ ಸ್ಥಳದಲ್ಲಿ ಹುಲ್ಲು ಮಾರುವ ಪ್ರಸಂಗವನ್ನು ತಂದು ಕೊಳ್ಳಲೇಬೇಡಾ !

**ಮಂಥರೆ**-ಇರಲಿ ಮಾಲತೀ, ಘಾಬರಿಯಾಗಬೇಡ, ರಾಮನಿಗೆ ಪಟ್ಟಗಟ್ಟುವುದರ್ಶಿಸಲುವಾಗಿ ಸಚಿವನಾದ ಸುಮಂತನು ಬೇಕಾದ ತಂತ್ರವನ್ನು ನಡೆಸಿದ್ದರೂ, ಆ ದುಷ್ಟನಾದ ವಶಿಷ್ಠನು ಬೇಕಾದ ಅಟ್ಟಹಾಸವನ್ನು ಮಾಡಿದ್ದರೂ, ಅವರೀರ್ವರ ಬುದ್ಧಿ ಜಾಲದಲ್ಲಿ ಸಿಕ್ಕ ದಶರಥ ಮಹಾರಾಜರು ಅವರಸುಮತಿಯಂತೆ ವರ್ತಿಸಲಿಕ್ಕೆ ಸಿದ್ಧರಾಗಿದ್ದರೂ ಒಂದು ನಿಮಿಷ ಒಂದು ನಿಮಿಷಮಾತ್ರದಲ್ಲಿ ಅವರೆಲ್ಲರ ವಿಚಾರಗಳನ್ನೂ ಹಾಳುಮಾಡಿ ಬಿಡುತ್ತೇನೆ. ಈ ಮಂಥರೆಯ ತಂತ್ರವನ್ನಾದರೂ ನೋಡುತ್ತಲಿರು ಹೇಗೆ ಕೋಲಾಹಲವನ್ನು ಮಾಡಬಿಡವುದು ! ದುಷ್ಟರಾಮನೇ, ಪಟ್ಟವನ್ನೇರಬೇಕೆನ್ನುನಿಯಾ ? ಆಗಲಾಗಲಿ, ನೋಡುತ್ತೇನೆ. ಪಟ್ಟವನ್ನೇರುವಿಯೋ, ನಟ್ಟಡವಿಯನ್ನು ಸೇರುವಿಯೋ, ನೋಡುತ್ತೇನೆ.

॥ ಚಾಲ್ ಕ್ಷಮಿಸಿರಿಮಧಪರಾಧವಾ ॥

ಘನ ಯೋಜನಾವ ದೂರನು | ಈ ಮಂಥರೆಯಾ ತಂತ್ರಗಳಿಗೆ | ತಾಮಸ
ಕೃತಿ ನಿಷ್ಫಲಗಳಿವು | ಘನ ಸಾಹಸ ಸನ್ನಯವಿದೆ | ಕಾಮಿತಾರ್ಥವ ಪಡೆಯುವೆ |
ನೀನಿಂದು ನೋಡುವೆನ ॥ ಈ ರಾಮನ ಪಟ್ಟಾಭಿಷೇಕವ | ನೆರವೇರಿಸಲೀ ಹರಿಹ
ರಾದಿಗಳ್ | ಧರೆಯೊಳ್ ಒಂದರೂ ಸಾಗದು | ನನ್ನ ಸಾಹಸವದುನು
ರೂಪ ಒಂದಿದೆ ॥೧॥

**ಮಾಲತಿ**-ವಿಚಿತ್ರ ಸಾಹಸಿಯಾದ ನೀನು ಯಶಸ್ವಿಯಾಗುವದೇ ನಿಜ

**ಮಂಥರೆ**-ಇರಲಿ ಮಾಲತೀ, ಈ ದಿನವೇ ಸಾಯಂಕಾಲದ ಸಮಯದಲ್ಲಿ ನೀನು ಕೈಕಯಾ ಮಹಾರಾಣಿಯವರಂತಃಪುರದಲ್ಲಿರು. ಆ ಸಮಯಕ್ಕೆ ಮುಂದಿನ ಆಲೋಚನೆಗಳನ್ನು ನಿಶ್ಚಯಿಸುವಾ. ( ಹೋಗುವರು )

# ಜಂಗಲ್ ರಸ್ತಾ.

( ಇಬ್ಬರು ವಟುಗಳ ಪ್ರವೇಶ )

**ದೇವದತ್ತ**--ಸುದರ್ಶನಾ, ಭಗವಾನ್ ವಶಿಷ್ಠ ಮಹಾಮುನಿಗಳು ಈಚೀಚಿಗೆ ಯಾವ ಕಾರಣದಿಂದಲೋ ಕೇವಲ ಚಿಂತಾಮಗ್ನರಾಗಿರುತ್ತಾರೆ.

**ಸುದರ್ಶನ**--ದೇವದತ್ತನೇ, ಮಹಾತ್ಮರಿಗಿರುವ ಬೇರೆ ಚಿಂತೆಯೇನು? ಜಗದ ಕಲ್ಯಾಣವು ಹೇಗಾದೀತೆನ್ನುವುದೊಂದೇ ಚಿಂತೆಯು.

**ದೇವದತ್ತ**-ಇದೊಳ್ಳೆ, ಲೆಕ್ಕಾಚಾರ! ಎಲೋ ಜಗತ್ಕಲ್ಯಾಣ ಚಿಂತಸೆಯ ಚಿಂತೆಯಿಂದ ತಾವು ಸೊರಗಿಸೊರಗಿ ಸಣ್ಣಾಗುವದೇಕೆ ?

**ಸುದರ್ಶನ**-ಮಿತ್ರಾ, ಮಹತ್ಮರಿಗೂ ಸಾಮಾನ್ಯ ಮಾನವರಿಗೂ ಇದೇ ವ್ಯತ್ಯಾಸವು ಸಾಮಾನ್ಯಮಾನವರು ಜಗವು ಹಾಳಾದರೂ ಚಿಂತೆ ಯಿಲ್ಲ, ತಮ್ಮದೊಂದು ಕಲ್ಯಾಣವಾಗಲೆಂದು ಸತತವಾಗಿ ಒದ್ದಾಡು ತ್ತಾರೆ. ಆದರೆ ಮಹಾತ್ಮರು ತಾವು ಹಾಳಾಗುವದನ್ನು ಲೆಕ್ಕಿಸದೇ ಅಹೋರಾತ್ರಿಯಲ್ಲಿಯೂ ಜಗದ ಕಲ್ಯಾಣಕ್ಕಾಗಿ ಪೇಚಾಡುತ್ತಾರ ತಿಳಿಯಿತೇ ?

**ದೇವದತ್ತ**-ಹಾಗಿದ್ದರೇ ಜಗದ ಕಲ್ಯಾಣವೇನಾಗುತ್ತಿರುವುದೆಂದವರು ಹೀಗೆ ಚಿಂತಾಮಗ್ನರಾಗಿರುವರು ?

**ಸುದರ್ಶನ**-ಅದು ಬರಬರುತ್ತ ತಾನೇ ಗೊತ್ತಾಗುವದು ಇರಲಿ ನಡೆ, ಮಹಾನುಭಾವರು ಯೋಗಶಾಲೆಗೆ ಬಂದಿರಬಹುದು.

**ದೇವದತ್ತ**-ಸುದರ್ಶನನೇ, ಅದೋ ನೋಡಿದಿಯಾ ? ಯಾವನೋ ಒಬ್ಬ ರಾಜನು ಆಶ್ರಮದ ಬಾಗಿಲಲ್ಲಿ ರಥವನ್ನು ನಿಲ್ಲಿಸಿ ಪಾದಚಾರಿಯಾಗಿ ಬರುತ್ತಿರುವನು. ನಿಲ್ಲು, ಅವನು ಗುರುಗಳ ದರ್ಶನಕ್ಕಾಗಿ ಬರುತ್ತಲಿ

ದ್ದಾನೆಂದು ಕಾಣುತ್ತೆ ಬಿಟ್ಟು ಹೋಗುವುದೇಕೆ ? ಸಂಗಡವೇ ಕರೆ
ದುಕೊಂಡು ಹೋಗುವಾ.

**ಸುದರ್ಶನ**–ಓಹೋ ದೇವದತ್ತನೇ, ಆತನು ದಶರಥ ಮಹಾರಾಜನ ಮಂತ್ರಿ
ವರ್ಯನಾದ ಸುಮಂತರಾಯನಲ್ಲವೇ ?

**ಸುಮಂತ**– ಮುನಿಕುಮಾರರಿಗಭಿವಂದಿಸುವೆನು

ಇಬ್ಬರು– ವಿಜಯಿಾಭವ ! ವಿಜಯಿಾಭವ !

**ಸುಮಂತ**– ಮಹಾತ್ಮರು ಆಶ್ರಮದಲ್ಲಿರುವರೇ ?

**ದೇವದತ್ತ**– ಇರುವರು. ಬಹುದಿನಗಳಲ್ಲಿ ಸುಮಂತರಾಯರ ದರ್ಶನವಾಗು
ತ್ತಿರುವದೆಂದ ಬಳಿಕ ಅಲಭ್ಯಲಾಭವೆಂತಲೇ ಹೇಳಬೇಕು.

**ಸುದರ್ಶನ**- ನಡೆಯಿರಿ ಆಲಸ್ಯಮಾಡುವುದೇಕೆ ? ಭಗವಾನ್‌ವಶಿಷ್ಠ ಮಹಾ
ಮುನಿಗಳಿರುವೆಡೆಗೆ ಹೋಗುವಾ.

## ( ಆಶ್ರಮ - ಪರ್ಣಕುಟೀರ)

**ವಶಿಷ್ಠ**–(ಸಚಿಂತ) ರಾಮಭದ್ರನಿಗೆ ಪಟ್ಟವು ಹೇಗಾದೀತು ?

ಸ್ವಾಮಿಾರಾಮಚಂದ್ರಾ | ಶ್ರೀ ಸ್ವಾಮಿಾ ರಾಮಚಂದ್ರಾ || ಭೂಮಿಯನಾಳುವ
ವನ್ನೂ ನೋಡುವೆನೇನೂ || ಪರಮುದಯಾಕರನವನೂ | ಪರಿಪಾಲಿಸಪ್ರಜ
ರನ್ನೂ | ವರಜನಕನತೆರದಿತಾನು | ಧರ್ಮವನುಬಿಡದೇ ||೧||

ಈ ಪುಣ್ಯಭೂಮಿಯಾದಾರ್ಯಾವರ್ತವು ಕೆಲವು ಕಾಲದವರೆಗೆ ದುಃಖ
ದಾಯಕ ಪರಿಸ್ಥಿತಿಯಲ್ಲಿ ಇರಬಹುದೆಂದು ಅನುಮಾನವಾಗುತ್ತಲಿದೆ
ಯಾಕಂದರೆ ಜಗತ್ತಿನಲ್ಲಿ ಆಸುರೀ ವಿಚಾರದ ಕ್ಷತ್ರಿಯರು ಹೆಚ್ಚಾಗು
ತ್ತಲಿದ್ದಾರೆ. ಅವರಲ್ಲಗ್ರಗಣ್ಯನಾದ ರಾವಣನು ಕೇವಲ ಸಮಿಾಪ

ದಲ್ಲಿರುವನು. ಅವನು ಸಮಯ ಸಾಧಿಸಿ ಈ ಪುಣ್ಯಭೂಮಿಯನ್ನು ಪಾದಾಕ್ರಾಂತಮಾಡಿಕೊಳ್ಳದೇ ಯಾವಕಾಲಕ್ಕೂ ಇರನು. ಒಂದು ವೇಳೆ ಆ ದುರಾತ್ಮನ ಇಚ್ಛೆಯು ನೆರವೇರಿತೆಂದರೆ ಈ ಆರ್ಯಾವರ್ತದ ಲಕ್ಷಣವೇ ನಾಶವಾಗುವದು ಇಲ್ಲಿಯ ಆಧ್ಯಾತ್ಮಿಕ ಸಂಪತ್ತಿಯ ಉನ್ನತಿಯು ತಪ್ಪಿ ಅವನತಿಗೆ ಪ್ರಾರಂಭವಾಗುವದು ಅದರಿಂದ ನಿಖಿಲಜಗದಧಃಪಾತವಾಗುವದು ಅಂತಹ ಭಾವೀ ದುಸ್ಥಿತಿಯನ್ನು ತಪ್ಪಿಸುವದಕ್ಕಾಗಿ ನಾನು ಮಾಡಿದಾಲೋಚನೆಯೇ ಯುಕ್ತವಾದದ್ದು. ಅದನ್ನು ನೆರವೇರಿಸುವ ಭಾರವು ಶ್ರೀಮನ್ನಾರಾಯಣನನ್ನೇ ಸೇರಿದೆ

**ವಟುಗಳು**– ಪೂಜ್ಯರ ಪಾದಕ್ಕೆರಗುವೆವು

**ವಶಿಷ್ಠ**-ಶಿಷ್ಯರೇ, ಮತ್ತೇನು ವಿಶೇಷ? ಬಹುತ್ವರದಿಂದ ಬಂದವರಾಗಿ ಕಾಣುವಿರಿ !

**ವಟುಗಳು**-ಮಂತ್ರಿವರ್ಯರಾದ ಸುಮಂತರಾಯರು ಪೂಜ್ಯರ ಪಾದ ಸಂದರ್ಶನಾಪೇಕ್ಷಿಗಳಾಗಿ ಹೊರಭಾಗದಲ್ಲಿ ನಿಂತಿದ್ದಾರೆ

**ವಶಿಷ್ಠ**-(ಆತುರದಿಂದೆದ್ದು) ಸುಮಂತರಾಯನು ಬಂದಿರುವನೇ ?

**ವಟುಗಳು**-ಅಹುದು, ಪೂಜ್ಯರೇ.

**ವಶಿಷ್ಠ**-(ಸುಮಂತನನ್ನು ಕರೆದುತಂದು ಯೋಗ್ಯವೃತ್ತಾಪನವನ್ನು ಕೊಟ್ಟು) ಮಂತ್ರಿವರ್ಯನೇ, ದಶರಥರಾಯನು ಕುಶಲವೇ ?

**ಮಂತ್ರಿ**-ಭಗವಾನ್, ಪುತ್ರಮಿತ್ರಕಳತ್ರಾದಿಗಳಿಂದ ಸುಖರೂಪರಾಗಿದ್ದಾರೆ ಮತ್ತು ತಮ್ಮ ಚರಣಾರವಿಂದಗಳ ಒಳಿಯಲ್ಲೊಂದು ಶುಭಾಲೋಚನೆಯನ್ನು ವಿಜ್ಞಾಪಿಸಿಕೊಳ್ಳುವುದಕ್ಕಾಗಿ ನನ್ನನ್ನು ಕಳುಹಿಸಿದ್ದಾರೆ.

**ವಶಿಷ್ಠ**-ಹೇಳಿ ಹೇಳಿ, ಯಾವ ಶುಭವಾರ್ತೆಯದು ?

**ಮಂತ್ರಿ-** ಚಾಲ್ ॥ ರಾಗ- ತಿಲಂಗ್ ಮಜಬಲರಾ ಪೋಗದಾಶಿಕವಿಲೀ ॥

ಧರಣಪತಿಯು ನಿಶ್ಚಯವನ್ನೈದಿಹಾ । ಶ್ರೀರಾಮಗೆ ಪಟ್ಟಾಭಿಷೇಕವಾ । ತ್ವರಿತ ಗ್ರಹದುಷ್ಕರಕೃತ್ಯನಾಗುವಾ ॥ ಈ ವಾರ್ತೆಯನಾಲಿಸಿ ಪ್ರಜಾಜನ । ತಾವು ಮುದಿತರಾಗಿರುವರತಿಶಯಾ ॥೧॥

**ವಶಿಷ್ಠ-** ಅಹಹಾ! ದಶರಥ ಮಹಾನುಭಾವನೇ, ಒಳ್ಳೇ ಶುಭವಾದಾಲೋಚನೆಯನ್ನು ಮಾಡಿದೆ. ಜಗವು ನಿನ್ನ ವಿಷಯದಲ್ಲೇನೋ ಒಂದು ಬೇರಾಲೋಚನೆಯನ್ನು ಮಾಡುತ್ತಿತ್ತು

**ಮಂತ್ರಿ-** ಜಗವು ಮಾಡಿದಾಲೋಚನೆಯಾದರೂ ತಪ್ಪಾದದ್ದಲ್ಲ ಯಾಕಂದರೆ- ತಾವೇ ನೋಡಿ ಯುವರಾಜ ರಾಮಚಂದ್ರ ಮಹಾರಾಜರೇನು ಸಾಮಾನ್ಯರೇ? ಕೇವಲ ಬುದ್ಧಿಶಾಲಿಗಳು, ಧೀರೋದಾತ್ತರು, ಪರಾಕ್ರಮದಲ್ಲದ್ವಿತೀಯರು, ರಾಜ್ಯಭಾರವನ್ನು ಮಾಡುತ್ತ ಪ್ರಜಾಜನ್ನರಂಜನಮಾಡಲರ್ಹವಯಸ್ಕರು ಅಲ್ಲದೆ ಪಟ್ಟಕ್ಕೆ ಬಾಧ್ಯರಾದವರಿಗೆ ದಶರಥ ಮಹಾರಾಜರು ಈ ಮೊದಲಲ್ಲಿಯೇ ರಾಜ್ಯಚಾಲನದ ಸೂತ್ರಗಳನ್ನು ಕೊಡಬಹುದಾಗಿತ್ತು ಹಾಗವರು ಮಾಡಲಿಲ್ಲವಾದುದರಿಂದಲೇ ಪ್ರಜಾ ಜನರಲ್ಲಿ ಸಂಶಯವನ್ನುಂಟು ಮಾಡಿವರು ಅಂತಹ ಸಂದರ್ಭದಲ್ಲಿ ಪ್ರಜರು ವಿಧವಿಧವಾದ ಕಲ್ಪನೆಗಳನ್ನು ಮಾಡಿದ್ದೇನೂ ತಪ್ಪಾದದ್ದಲ್ಲ

**ವಶಿಷ್ಠ-** ಚಾಲ್- ಈಶಫೇಯಿ ಅವತಾರಾಲಾ

ಭೂಮಿಯುತಾ । ನಮರಾಲಯವಾ । ಸುಮನೋಹರತ ತಾಳುವದಿನ್ಸ್ । ಕ್ರಮವಾಗಿಪೇಳ್ವೆ ॥ ರಾಘವನಿಗೆ । ಈ ಜಗದೊಳು । ಸುಗುಣದೊಳಗಾರಾಗು ವರು ಸಮ ॥೧॥

ಆಗಲಿ, ಸುಮಂತ್ರನೇ, ಇದೇ ದಿನವೇ ಸೂರ್ಯಾಸ್ತದೊಳಗಾಗಿ ಸಾಕೇತ ನಗರವನ್ನು ಸೇರುವಾ, ಮತ್ತು ಆದಷ್ಟು ಜಾಗ್ರತೆಗಾಗಿ ಶ್ರೀರಾಮ

ಭದ್ರನಿಗೆ ಪಟ್ಟಾಭಿಷೇಕವನ್ನು ಮಾಡುವಾ ಯಾಕಂದರೆ ಶುಭಕಾರ್ಯ
ಗಳಿಗಾಲಸ್ಯವು ತರವಲ್ಲ, ನೋಡಿ.

**ಮಂತ್ರಿ**-ಅಂತೇ ತ್ವರಿತವಾಗಿ ಭಗವಾನರ ಸನ್ನಿಧಾನದಲ್ಲಿ ಬಂದೆನು

**ವಶಿಷ್ಠ**-ಶಿಷ್ಯರೇ, ಮಧ್ಯಾಹ್ನವಾಗುತ್ತ ಬಂತು ಅನಾಯಾಸವಾಗಿ ಬಂದಿ
ರುವ ಸುಮಂತ ಮಹಾನುಭಾವನ ಆತಿಥ್ಯವನ್ನು ಮಾಡಿ ಕೃತಾರ್ಥ
ರಾಗಿರಿ. ಸುಮಂತನೇ, ಶಿಷ್ಯರೊಂದಿಗೆ ಹೋಗಬಹುದು

**ಸುಮಂತ**-ಮಹದಾಜ್ಞಾ (ಶಿಷ್ಯರೊಡಗೂಡಿ ಹೋಗುವನು)

**ವಶಿಷ್ಠ**-ಯದ್ಯಪಿ ದಶರಥರಾಯನು ಶ್ರೀರಾಮಭದ್ರನಿಗೆ ಪಟ್ಟಕಟ್ಟುವ
ಶುಭಾಲೋಚನೆಯ ನಿಶ್ಚಯವನ್ನು ಮಾಡಿದ್ದರೂ ಶ್ರೀರಾಮಚಂದ್ರನು
ಸಿಂಹಾಸನವನ್ನೇರಿ ರಾಜ್ಯ ಸೂತ್ರಗಳನ್ನು ಕೈಯಲ್ಲಿ ತೆಗೆದುಕೊಳ್ಳುವ
ತನಕ ವಿಶ್ವಾಸವಿಲ್ಲ. ಯಾಕಂದರೆ,-

**ಚಾಲ್ ॥ ಮಯವಿರಚಿತದಿವ್ಯಸಭಾ**

ಪರಿವೇಷ್ಟಿತನಾಗಿರುವಾ | ಆ ರವಿಕುಲಭೂಮಿಧವಾ | ಪರಮಹಂಸ
ಮಾನಸಪರಿವಾರದಿಂದ ಸಮುಭಾವಾ ॥ ವಿಪರಿವಿಘ್ನಗಳಜಾಲ | ವಿರಚಿಸಿ
ಸತ್ಕಾರ್ಯದಲ್ಲಿ | ತೋರದಿರದುಪ್ಪಸ್ತ್ಯಯುವಾ | ಬರುವದು ಸಂಶಯ ಸಚಿವಾ ॥೧॥

## ಕೈಕಯೀ ಮಹಾಲ್

**ಕೈಕಯಾ**-(ದಾಸೀಜನರು ಸೇವೆಯನ್ನು ಮಾಡುತ್ತಿರುವರು) ದಾಸಿಯರೇ
ಮಂಥರೆಯೆಲ್ಲಿ ?

**ದಾಸಿ**-ದೇವಿಯವರೇ, ಇಷ್ಟು ಹೊತ್ತಿನತನಕ ಇಲ್ಲಿಯೇ ಇದ್ದವಳು ಈಗೆ
ಲ್ಲಿಯೋ ಹೊರಗೆ ಹೋಗಿದ್ದಾಳೆ.

**ಕೈಕಯಾ**-ಇದೋ ದಾಸಿಯರೇ ಸ್ವಲ್ಪದಿನಗಳಲ್ಲಿಯೇ ಶ್ರೀರಾಮನಿಗೆ ಪಟ್ಟಾ

ಭಿಷೇಕವನ್ನು ಮಾಡತಕ್ಕವರಿದ್ದೇವೆ. ಆಗಿನ ಸಮಯದಲ್ಲಿ ನೀವೆಲ್ಲರೂ ಒಳ್ಳೇ ಸಾಹಸವನ್ನು ಮಾಡಬೇಕು ಏಕಂದರೆ ಪಟ್ಟಾಭಿಷೇಕ ಮಹೋತ್ಸವವು ಬಹು ವಿಜೃಂಭಣೆಯಿಂದ ಜರಗಬೇಕಾಗಿದೆ. ಅದನ್ನು ನೋಡುವುದಕ್ಕಾಗಿ ನಿಮಂತ್ರಿತರಾದ ಎಷ್ಟೋ ಜನ ಮಹರ್ಷಿಗಳೂ ಮತ್ತು ಮಹೀಪತಿಗಳೂ ತಮ್ಮ ತಮ್ಮ ಪರಿವಾರದೊಡನೆ ಬರತಕ್ಕವರಿದ್ದಾರೆ. ಅವರವರ ತಕ್ಕ ಯೋಗಕ್ಷೇಮವನ್ನು 'ತೆಗೆದುಕೊಳ್ಳುವದಕ್ಕಾಗಿ ನೀವೆಲ್ಲರೂ ದಕ್ಷರಾಗಿರಲಿಕ್ಕೇ ಬೇಕು; ಈ ರಾಮಭದ್ರ ಪಟ್ಟಾಭಿಷೇಕ ಮಹೋತ್ಸವದಲ್ಲಿ ನೀವು ದಕ್ಷತೆಯಿಂದ ಶ್ರಮಪಟ್ಟರೆ ಅದಕ್ಕೆ ತಕ್ಕ ಫಲವು ಸಿಗಲಿಕ್ಕೇಬೇಕು.

ಚಾಲ್ ॥ ಪಾಂಡವಾ ಸಮ್ರಾಟ್ ಪದಾಲಾ

ಪಾವಿತ್ರೋಷಾಸೀಮಾಸೇನಾ | ಸಲ್ಲುವಪೇದಿವ್ಯಮಾದಾ ॥ ಬಲ್ಲಿದಾಭೂಷಣಗಳಿಂದಾ | ನಲ್ಲೆಯರೆಂತಾಳಿಪೋದಾ ॥ ಅಯೋಧ್ಯಾಧಿಪತಿಯಾಗಲೆನ್ನಯಾ | ಸುಯುಕವಂತಾರಾಮಚಂದ್ರಾ ॥ ೧ ॥

**ಮಂಥರಾ-** (ಪ್ರವೇಶಿಸುತ್ತ ಸ್ವಗತ) ಬುದ್ಧಿಗೇಡಿಯಾದ ಕೈಕಯಾರಾಣಿಯು ಹೇಗೆ ಆತ್ಮಘಾತದ ವಿಚಾರಗಳನ್ನು ಮಾಡುತ್ತಿರುವಳು. ಇವಳಿಗೆ ಅಂಜನವನ್ನು ಹಾಕಲಿಕ್ಕೇಬೇಕು ಇಲ್ಲವಾದರೆ ಕಾರ್ಯಹಾನಿಯಾದೀತು.

ಚಾಲ್ ॥ ಜಾ ಯೇಧುನಿ ಚಾಂಡಾಲಾನದಾವಿ

ಸಾಕಾಯಿತುಯೆನಗೆ ನಿಪ್ಪಸೇವೆಯು ಸಾಕೇತಾಧಿಪರಾಣಿಯುರೇ ಸುಖವಿಷ್ಟೋಗಲಾಜ್ಞೆಯಾನೀಡಲೇ | ಬೇಕು ಕೈಕಯಾದೇವಿಯುರೇ ॥ ಧರಾತಲದೊಳಿತ್ತಲಾದರಾಜಪಸೇರಿ ಕಾಲವಾಕಳೆಯುವೆನು | ಧರಣಿಪರಾಲಯುದಿರುವುದೆಬೇಡಾ | ಮರಣವುಬಂದರು ಲೇಸೆಂದೂ | ನಿಧಾರ್ರವಗೈವಿರುವಳುತವ ಕಿಂ ! ಕರಿಮೂಕೋಪವಪಾಪದಿರೀ ॥ ೧ ॥

**ಕೈಕಯಾ-** ಮಂಥರೇ ನಿನಗೇನಾಯಿತೇ? ಒಮ್ಮಿಂದೊಮ್ಮೆ ನನ್ನಾಶ್ರಯ ವನ್ನು ಬಿಡುವೆನೆಂದು ಹೇಳುವಿ।

**ಮಂಥರೆ-** ಮಹಾರಾಣಿಯುವರೇ, ನಿಜವಾದ ಕಾರಣವನ್ನು ಹೇಳಿವರೆ ಅಧಿಕ ಪ್ರಸಂಗವನ್ನು ಮಾಡಿದಂತಾಗುವದು ಕಾರಣ ಆ ಹವ್ಯಾಸವೇ ಬೇಡಾ ಸಾಕು, ಇಷ್ಟು ದಿನಗಳ ತನಕ ತಮ್ಮಾಶ್ರಯದಲ್ಲಿ ಮರ್ಯಾದೆಯಿಂದ ಕಾಲಹರಣಮಾಡಿದೆನು, ಅಷ್ಟೇಸಾಕು.

**ಕೈಕಯಾ-** ಇನ್ನು ಮುಂದಾದರೂ ಅದರಂತೆಯೇ ಕಾಲಹರಣ ಮಾಡ ಲಿಕ್ಕೆ ನಿನಗಾತಂಕವೇನು?

**ಮಂಥರೆ-** ಆತಂಕವಾಗುವದಂತೇ ಈಗ್ಗೆ ತಮ್ಮಾಶ್ರಯುವನ್ನು ಬಿಡಲಿಕ್ಕೆ ಸಿದ್ಧಳಾಗಿರುವೆನು. ದೇವಿಯುವರೇ, ಸಿಟ್ಟಾಗಬೇಡಿ ತಾವು ಇಷ್ಟು ಸ್ವಾಭಿಮಾನಶೂನ್ಯರಿರಬಹುದೆಂದು ನಾನೆಣಿಲಿಲ್ಲ.

**ಕೈಕಯಾ-** ಏನು ? ನಾನು ಸ್ವಾಭಿಮಾನ ಶೂನ್ಯಳೇ ?

**ಮಂಥರೆ-** ಅಹುದಹುದು; ಅದಕ್ಕೆ ಬೇರೆ ಪ್ರತ್ಯಂತರವೇ ಬೇಡಾ; ರಾಮನ ವಶಕ್ಕೆ ರಾಜ್ಯಭಾರವು ಹೋಗುವದನ್ನು ಕೇಳುತ್ತಾ ಸುಮ್ಮನಿರುವಿರಿ. ಇಷ್ಟೇ ಕಾರಣವು ಸಾಕು.

**ಕೈಕಯಾ-**ಏನು ರಾಮನ ವಶಕ್ಕೆ ರಾಜ್ಯವು ಹೋಗಬಾರದೆಂದಾಲೋಚಿ ಸಲೇ ? ಛೀ ! ಹೀಗೇನು ಹೇಳುವೇ ? ರಾಮನು ಪಟ್ಟಕ್ಕೆ ಬಾಧ್ಯನ ಲ್ಲವೇ? ನಮ್ಮ ಮಕ್ಕಳಲ್ಲಿ ಹಿರಿಯುವನಲ್ಲವೇ? ಅವನು ಜನಿಸಿದಾಗಿನಿಂದ ನಮ್ಮ ಭಾಗ್ಯವು ಹೆಚ್ಚಿಲ್ಲವೇ ? ಅವನಲ್ಲಿ ರಾಜ್ಯವಾಳುವ ಸಕಲ ಸದ್ಗು ಣಗಳಿಲ್ಲವೇ ? ಬೇಡ, ಮಂಥರೆ, ಮನಸ್ಸಿನಲ್ಲಿ ಇಂತಹ ಕುಕಲ್ಪನೆ ಯುನ್ನು ನೆನೆಯಬೇಡಾ. ನನ್ನ ರಾಮನು ಕೀರ್ತಿಮಂತನು, ಆತನ ತಾರುಣ್ಯವು ಸದ್ವರ್ತನೆಯಿಂದ ಶೋಭಿಗೊಂಡಿದೆ, ಮುಖವು ಸತ್ಯ

ದಿಂದ ಪ್ರಕಾಶಮಾನವಾಗಿದೆ, ರಾಜೀವ ಸಮಾನವಾದ ನಯನಗಳಲ್ಲಿ ದಯಾದಾಕ್ಷಿಣ್ಯಾದಿಗಳು ಹೊಳೆಯುತ್ತಲಿವೆ; ಬಾಹುಗಳು ವೀರಾಗ್ರೇಸರತ್ವದ ಬಿರುದುಗಳನ್ನು ವಹಿಸಿವೆ, ಹೃದಯವು ಪ್ರಜಾವಾಂಛಲ್ಯದಿಂದ ಆರ್ದ್ರವಾಗಿದೆ. ಇಂತಹ ನನ್ನ ರಾಮನ ವಶಕ್ಕೆ ರಾಜ್ಯಭಾರವನ್ನು ಕೊಡಬಾರದೆಂದಾಲೋಚಿಸಿದರ ದೇವರು ಮೆಚ್ಚುವನೇ ?

ಚಾಲ್–ಬೋಲಹೋಯಿಲಫೋ

ಬೇಹವೀತೆರವಾ | ಕಟುವಿಚಾರಾ || ಸಮುಗುಣಧಾಮಾ | ಮಮಸುತನು
ಜಾತರಾಮಾ | ಭರತನಂತೆನೋಳ್ಪೆ ||೧||

**ಮಾಲತಿ**–ದೇವಿಯವರೇ, ಭಾವೀ ಅನರ್ಥಗಳ ಚಿತ್ರವನ್ನು ತಾವು ಕಲ್ಪನಾಚಕ್ಷುಗಳಿಂದ ನೋಡಿಲ್ಲವಂತೇ ಹೀಗೆ ರಾಮಭದ್ರನ ವಿಷಯದಲ್ಲಿ ದಾಕ್ಷಿಣ್ಯವನ್ನು ತೋರಿದಿರಿ ಸ್ವಲ್ಪ ಸಮಾಧಾನದಿಂದ ಪರ್ಯಾಲೋಚಿಸಿದರ ಈಗಿನ ತಮ್ಮ ವಿಚಾರಗಳು ಘಾತಕ ವಿಚಾರಗಳಾಗಿ ಕಂಡಾವು

**ಕೈಕಯಾ**-ಏನು, ನನ್ನ ಈಗಿನ ವಿಚಾರಗಳು ಘಾತಕ ವಿಚಾರಗಳೇ ?

**ಮಂಥರೆ**-ಘಾತಕ ವಿಚಾರಗಳಲ್ಲದೇ ಮತ್ತೇನು ? ರಾಣಿಯವರೇ, ಬೇಡಿರಿ; ಹೀಗೆ ವಿಚಾರಗಳನ್ನು ಮಾಡಬೇಡಿರಿ ರಾಮನಿಗೆ ರಾಜ್ಯವಾದರೆ ನಿಮ್ಮ ತನುಜಾತನಾದ ಭರತನು ವನವಾಸಿಯಾಗದಿರುವನೇ? ಇಂದಿನ ತನಕ ನಿಮಗೆ ವಿಧೇಯಳಾಗಿದ್ದ ಕೌಸಲ್ಯಾದೇವಿಯ ಮಗನಾದ ಆ ರಾಮನಿಗೆ ರಾಜ್ಯವಾದರೆ ಈಗಿನ ನಿಮ್ಮ ಗೌರವವು ಉಳಿಯುವುದೇ ? ಸಾಕೇತನಾಥನಾದ ದಶರಥರಾಯನನ್ನು ಸಹಾ ಅಂಕೆಯಲ್ಲಿಟ್ಟುಕೊಂಡ ನೀವು ಆ ಕೌಸಲ್ಯಾದೇವಿಗೆ ತಲೆಬಾಗಿ ನಡೆಯಬೇಕಾದೀತಲ್ಲವೇ ? ಅಯೋ ! ಹೂ ಮಾರಿದ ಸ್ಥಳದಲ್ಲಿ ಹುಲ್ಲು ಮಾರಬೇಕೇ ?

**ಮಾಲತಿ**–ದೇವಿಯವರೇ, ದಯಮಾಡಿ ರಾಮನ ವಶಕ್ಕೆ ರಾಜ್ಯವನ್ನು ಹೋಗ

ಗೊಡಬೇಡಿ ಮಂಥರೆಯು ಅಭಿಪ್ರಾಯವನ್ನು ಚಿತ್ರೈಸಿ ಇವಳು ನಿಮ್ಮ ಪ್ರೀತಿಯವಳಲ್ಲವೇ ? ಕೇವಲ ನಿಮ್ಮ ಹಿತವನ್ನು ನೆನೆಯತಕ್ಕ ವಳಲ್ಲವೇ ?

**ಮಂಥರೆ**–(ದುಃಖಿಸುತ್ತ) ದೇವಿಯವರೇ, ಹೊಟ್ಟೆಯೊಳಗಿನ ಸಂಕಟಗಳನ್ನೇ ನು ಹೇಳಲಿ ? ಆ ರಾಮನಿಗೆ ರಾಜ್ಯವಾಗುವ ಸುದ್ದಿಯನ್ನು ಕೇಳಿ ಈಗಿ ನಿಂದಲೇ ಜನಗಳು ನಮ್ಮನ್ನು ಕಸಪಲ್ಲಿ ಗಣಿಸುತ್ತಲಿದ್ದಾರ ಹೀಗಿ ರಲು ಅವನ ವಶಕ್ಕೆ ರಾಜ್ಯವು ಹೋದಸಂತರವಲ್ಲ ನಮ್ಮ ಗತಿಗಳೇ ನಾಗಬೇಕು ?

**ಮಾಲತಿ**–ನಮ್ಮ ಗತಿಗಳೇನಾಗುವುದೆಂಬುವೂ ಇದೇ ದಿಸವೇ ಬೆಳಗಿನ ಝಾವದಲ್ಲಿ ನಿದರ್ಶನಕ್ಕೆ ಬಂದೇ ಬಿಟ್ಟಿದೆ.

**ಕೈಕಯಾ**–ಅದು ಹೇಗೆ ?

**ಮಂಥರೆ**-ನಿಮ್ಮ ಚರಣಸೇವಕಳಾದ ಮಂಥರೆಯು ಶ್ರೀ ಪಾದಸ್ವಾಮಿಯ ದರ್ಶನಕ್ಕೆ ಬರುತ್ತಿರುವಳು. ಸ್ವಲ್ಪ ತಾಳಿರಿ. ಬಾಗಿಲನ್ನು ಮುಚ್ಚಿ ಕೊಂಡು ಹೋಗಬೇಡಿರೆಂದು ಮಾಲತಿಯು ಶ್ರೀದೇವನ ಪೂಜಾರ್ಯ ನಿಗೆ ಹೇಳಿದರೂ, "ಅವಸು ನನಗವಕಾಶವಿಲ್ಲ, ದರ್ಶನವನ್ನು ತೆಗೆದು ಕೊಳ್ಳುವುದಾದರೆ ಬಾಗಿಲಲ್ಲಿ ಇಟ್ಟಿರುವ ಕಿಂಡಿಯೊಳಗಿಂದ ದರ್ಶನ ವನ್ನು ತೆಗೆದುಕೊಳ್ಳಲಿ" ಎಂದು ಫಕ್ಕನೆ ಬಾಗಿಲನಿಕ್ಕಿಕೊಂಡು ಹೊರಟುಹೋದನು.

**ಮಾಲತಿ**–ಅದಾದರೂ ಏನೂ ಮಹತ್ವದ್ದಲ್ಲ. ಆದರೆ ಬರುವಾಗ್ಗೆ ಕೌಸಲ್ಯಾ ರಾಣಿಯವರ ದಾಸಿಯಾದ ಮಂದಾನಿಕಿಯು ಮಾಡಿದ ಹಾಸ್ಯದಿಂದ ನನ್ನ ಹೊಟ್ಟೆಯಲ್ಲಿ-ದೇವಿಯವರೇ, ನಿಶ್ಚಯವಾಗಿ ಕಿಚ್ಚು ಸುರಿಯಿತು

**ಕೈಕೆಯೂ**-ಏನೆಂದು ಹಾಸ್ಯಮಾಡಿದಳು ?

**ಮಾಲತಿ**-"ಎಲೆ ಮಾಲತಿ ? ಇಷ್ಟುದಿನಗಳ ತನಕ ಕೌಸಲ್ಯಾದೇವಿಯ ಪಕ್ಷದವರಾದ ನಾವು ನಿಮ್ಮ ದಾಸತ್ವವನ್ನು ಮಾಡಿದೆವು. ಇನ್ನು ರಾಮನಿಗ ರಾಜ್ಯವಾದನಂತರ ನೀವು ನಮ್ಮ ದಾಸತ್ವವನ್ನು ಮಾಡಿರಿ,, ಎಂದು.

**ಮಂಥರೆ**-ಆ ಧೂರ್ತನಾದ ಸುಮಂತನೇನೋ ಹೇಳುತ್ತಾನಂತೇ ! ರಾಮನಿಗೆ ರಾಜ್ಯವಾಗದ ಹೊರತು ಸಾಕೇತ ಸಿಂಹಾಸನಕ್ಕೆ ಸ್ಥೈರ್ಯವುಂಟಾಗಲಾರದ ಕಾರಣ ಅವನ ಸ್ವಾಧೀನಕ್ಕೆ ತೀವ್ರ ರಾಜ್ಯವನ್ನು ಕೊಡಲೇಬೇಕು,,

**ಮಾಲತಿ**-ಪ್ರಜಾಜನರ ಉಲ್ಬಣವಂತೂ ಮಿತಿಮೀರಿ ಹೋಗಿದೆ. ರಾಮನಿಗೆ ರಾಜ್ಯವಾಗುವ ವಿಚಾರವು ಇನ್ನೂ ಗರ್ಭಾವಸ್ಥೆಯಲ್ಲಿರುವಾಗಲೇ ಆನಂದದಿಂದ ಕುಣಿದಾಡುತ್ತಿರುವರು.

**ಮಂಥರೆ**-ನಮ್ಮನ್ನು ನೋಡುತ್ತಲೇ ತಿರಸ್ಕಾರವನ್ನು ವ್ಯಕ್ತಮಾಡುತ್ತಿರುವದು ಮುಖ್ಯವೇನು ? ಇನ್ನು ಮೇಲೆ ಬಾಳಿರುವುದರಲ್ಲಿ ಮರ್ಯಾದೆಯಿಲ್ಲ ಇಷ್ಟು ದಿನಗಳಲ್ಲಿ ಕೈಕಯಾರಾಣಿಯವರ ಹೆಸರು ಕೇಳಿದರ ನಡುಗುತ್ತಿದ್ದವರು ಈಗ ಹಾಸ್ಯಮಾಡುತ್ತಿರುವರೆಂದ ಬಳಿಕ ಇದಕೂ ಹೀನ ಜೀವಿತವು ಮತ್ತಾವುದು ?

**ಕೈಕಯೂ**-ನಮ್ಮ ವಿಷಯದಲ್ಲಿ ಪ್ರಜಾಜನವು ಇಷ್ಟು ತಿರಸ್ಕಾರವನ್ನು ವ್ಯಕ್ತಮಾಡುತ್ತಿರುವದೇ ?

**ಮಂಥರೆ**-ದೇವಿಯವರೇ, ವಿಶೇಷವೇನು ? ಅವರ ಕಣ್ಣುಗಳಿಗೆ ನಾವೆಂಥ ತೃಣಪದಾರ್ಥವು ?

**ಕೈಕಯೂ**-ಹೀಗೆ ಮಾಡುವವರಿಂದವರ ಉದ್ದೇಶವು ಸಾಧ್ಯವಾದಂತಾಯಿತೇನು ?

**ಮಂಥರೆ**–ಅವರ ಸಾಧ್ಯದಲ್ಲಿ ಇನ್ನೇನು ಮಿಕ್ಕಿದೆ? ದಶರಥ ಮಹಾರಾಜರಂತೂ ಒಪ್ಪಿಗೆಯನ್ನು ಕೊಡುವುದಲ್ಲದೆ ಅದಷ್ಟು ಜಾಗ್ರತೆಯಿಂದ ಕಾರ್ಯವನ್ನು ನೆರವೇರಿಸುವುದಕ್ಕಾಗಿ ವಶಿಷ್ಠರನ್ನು ಕೂಡಾ ಕರೆತರುವುದಕ್ಕಾಗಿ ಸುಮಂತರನ್ನು ಕಳುಹಿಸಿದ್ದಾರ. ಇನ್ನೇನು ?

**ಕೈಕಯಾ**–ಇಷ್ಟಾಗಿದ್ದರೂ ಅವರ ವಿಚಾರಗಳನ್ನು ತಿರುವಿಬಿಡಲೋ ? ನೋಡುವಿರಾ !

**ಮಾಲತಿ**-ನಮ್ಮಗಳಿಗೆ ಚಮತ್ಕಾರವನ್ನು ತೋರಿಸುವುದಕ್ಕಾಗಿ ಹಾಗೆ ಮಾಡುವುದಾದರೆ ಅದೇನೂ ಬೇಡ! ಶಾಶ್ವತವಾದ ಕರ್ತವ್ಯವಾಗುವಂತಿದ್ದರೆ ಆಗಲಿ.

**ಮಂಥರೆ**-ವಿಚಾರಮಾಡಿರಿ ಭರತನ ಕೈಯ್ಯಲ್ಲಿ ರಾಜ್ಯಸೂತ್ರಗಳೇತಕ್ಕೆ ಬರಲಾಗದು ? ಅವನೇನು ದಶರಥರಾಯನ ಮಗನಲ್ಲವೇ ? ರಾಮನೇನು ಹೆಚ್ಚಿನವನು ? ಜನಗಳು ಅವನನ್ನೇತಕ್ಕೆ ಅಷ್ಟೊಂದು ಕೊಂಡಾಡಬೇಕು ? ಇವರಿಗೇನವನು ಸ್ವರ್ಗಕ್ಕೆ ಒಯ್ದು ಬಿಟ್ಟಿರುವನೇ ? ಅದು ಹಾಗಿರಲಿ. ರಾಮನನ್ನು ಶ್ಲಾಘಿಸುವ ಭರದಲ್ಲಿ ಅವರು ನಮ್ಮನ್ನು ನೋಡಿ ಟೀಕಿಸುವದಕ್ಕೆ ಕಾರಣವೇನು ? ನಾವೇನವರ ಹಾನಿಯನ್ನು ಮಾಡಿರುವೆವು ?

**ಕೈಕಯಾ**-ವಸ್ತುಸ್ಥಿತಿಯು ಹೀಗಿರುವದೇ ! ಆಗಲಿ ನೋಡುವಾ

**ಮಾಲತಿ**-ಅಮ್ಮನವರೇ, ಅಂತಃಪುರದಲ್ಲಿರುವ ತಮಗೆ ಯಾವದೂ ಗೊತ್ತಾಗುವುದಿಲ್ಲ ವಸ್ತುಸ್ಥಿತಿಯು ಇದಕ್ಕೂ ಎಷ್ಟೋ ಮಿತಿಮೀರಿ ಹೋಗಿದೆ. ಅದೆಲ್ಲವನ್ನರಿಕೆಮಾಡಿಕೊಳ್ಳುವುದು ಸಾಧ್ಯವಿಲ್ಲ.

**ಕೈಕಯಾ**–ಆಗಲಾಗಲಿ ನೋಡುವಾ.

**ಮಂಥರೆ**-ನೋಡುವುದೇಬೇಡ, ಕರ್ತವ್ಯವನ್ನು ಮಾಡುವಾ ಎಂದು ಹೇಳಿ ಹಾಗಾಗದಿದ್ದರೆ ಪರಿಣಾಮವಾಗಲಿಕ್ಕಿಲ್ಲ ಬಹಿರಂಗದಲ್ಲ ಕೇವಲ ಗೋವುಗಳಾಗಿ ಕಾಣಿಸುವ ಸುಮಂತ ವಶಿಷ್ಠಾದಿ ರಾಮಪಕ್ಷದ ಜನ ಗಳು ಅಂತರಂಗದಲ್ಲಿ ನಿಶ್ಚಯವಾಗಿ ವ್ಯಾಘ್ರಗಳಂತಿರುವರು ಸಾಕೇತ ರಾಜ್ಯದ ತಮ್ಮ ಸಮ್ಮಂಧವನ್ನು ತಪ್ಪಿಸುವುದಕ್ಕಾಗಿ ಅವರು ವಿಪರೀತ ಕಾರಸ್ಥಾನವನ್ನು ನಡೆಸಿರುವರಂತೆ.

**ಕೈಕಯಾ**–ಏನು? ಸಾಕೇತರಾಜ್ಯದ ನಮ್ಮ ಸಮ್ಮಂಧವನ್ನು ತಪ್ಪಿಸುವರೇ? ದುರ್ಬಲರಾದವರ ವಿಚಾರಗಳನ್ನು ಹಾಳುಮಾಡಲಿಕ್ಕೆ ಒಂದು ನಿಮಿಷ –ಒಂದೇ ನಿಮಿಷ ಮಾತ್ರ ಸಾಕು

**ಮಂಥರೆ**-ಆ ವಶಿಷ್ಠನೇನೋ ಹೇಳುತ್ತಿರುವನಂತೆ-ದಶರಥಮಹಾರಾಜರು ತಮ್ಮನ್ನೊಡಗೂಡಿ ಆವನಾಶ್ರಮದಲ್ಲಿ ಸೇರಿಕೊಂಡು ಗಡ್ಡೆಗೆಣಸು ಗಳನ್ನು ತಿನ್ನುತ್ತ ಗಡ್ಡದ ಕಪಿಗಳ ಕೂಡ ಕಾಲಕ್ರಮಣ ಮಾಡ ಬೇಕಂತೆ ರಾಜ್ಯವೈಭವದಲ್ಲಿ ಕಾಲ ಕಳೆದವರನ್ನು ಒಮ್ಮಿಂದೊಮ್ಮೆ ವನವಾಸದ ವಿಪತ್ತಿಗೆ ಗುರಿಮಾಡುವ ಆ ದುರಾಲೋಚನೆಯ ಜನ ಗಳನ್ನೇನುಮಾಡಿದರೂ ಸಿಟ್ಟು ತೀರದು.

**ಕೈಕಯಾ**-ಬಯಿತು ಇದೇ ನಿಶ್ಚಯವು. ಅವರು ಮಾಡಿದಾಲೋಚನೆ ಗಳನ್ನು ವಿಧ್ವಂಸಮಾಡುವುದೇ ನಿಜ. ಏನು, ನಮಗೆ ವನವಾಸವನ್ನು ತರುವರೇ? ನೋಡುವಾ ನಾವು ವನವಾಸಿಗಳಾಗುವೆವೋ, ಏನಾ ರಾಮನು ವನವಾಸಿಯಾಗುವನೋ ನೋಡುವಾ. ಮಂಥರೇ, ರಾಮನ ವಶಕ್ಕೆ ರಾಜ್ಯವು ಹೋಗುವುದೆಂದು ವ್ಯಸನಪಡುತ್ತಿರುವ ನನ್ನ ಸೇವಕ ಪರಿವಾರಕ್ಕೆ ಸ್ವಸ್ಥಚಿತ್ತರಾಗಿರೆಂದು ಹೇಳು, ತೋರಿಸುತ್ತೇನೆ- ದೊಡ್ಡಸ್ತಿಕೆಯನ್ನು ಮಾಡಿಕೊಂಡು ರಾಮನಿಗೆ ರಾಜ್ಯವನ್ನು

ಕೊಡಿಸಬೇಕೆಂದಟ್ಟಹಾಸವನ್ನು ಮಾಡುತ್ತಿರುವ ಆ ವಶಿಷ್ಠ ಸುಮಂತ್ರಾದಿ ಮೂರ್ಖರಿಗೆ ಈ ಕೈಕಯಿಯ ಸಾಮರ್ಥ್ಯವು ಎಷ್ಟಿರುವುದೆಂಬುದನ್ನು ತೋರಿಸುತ್ತೇನೆ.

**ಮಂಥರೆ**-ಹಾಗೆ ಮಾಡಿದರೇನೇ ದೇವಿಯವರು ತಮ್ಮ ಅಸ್ತಿತ್ವವನ್ನು ಜಗತ್ತಿಗೆ ಸಿದ್ಧಮಾಡಿ ತೋರಿಸಿದಂತಾಗುವುದು

**ಕೈಕಯಾ**-ನೋಡುವಾ, ನನ್ನ ವಿಚಾರಗಳಿಗಾರಾರು ಎಷ್ಟೆಷ್ಟು ವಿಘ್ನವನ್ನು ಕಲ್ಪಿಸುವರೋ ? ನೋಡುವಾ

**ಮಂಥರೆ**-ಯಾರೇನು ವಿಘ್ನವನ್ನು ನೆನೆದರೂ ಏನಾಗಬೇಕಾಗಿದೆ ? ರಾಮನಿಗೆ ರಾಜ್ಯವನ್ನು ಕೊಡುವ ದಶರಥ ಮಹಾರಾಜರನ್ನುವ ಪ್ರಬಲ ಶಕ್ತಿಯೇ ತಮ್ಮಾಧೀನದಲ್ಲಿರುವದಲ್ಲವೇ ?

**ಕೈಕಯಾ**-ಇರಲಿ ನೀವಲ್ಲರೂ ನಿಮ್ಮ ನಿಮ್ಮ ಕೆಲಸಗಳಿಗೆ ಹೋಗಿರಿ. ಈ ವಿಷಯದಲ್ಲಿ ನಾನು ಪರ್ಯಾಲೋಚಿಸಿ ಹೇಳುವೆನು.

ಚಾಲ್ ॥ ಉಗ್ರಮುಖಬಹುವಿಕಟ

ಸಾಧಿಸಲಿಯೆನಿತು ಮನವಾಂಛಿತವ ನಾನೂ | ಅಧಮಜನಸಂಕಲ್ಪ ವಿಫಲಗೈವಿನ್ನೂ ॥ ಭರತನಿಗೆ ರಾಜ್ಯ ರಾಮನಿಗೆ ವನವಾಸಾ | ತರಿಸವೇ ಮನವು ತಾಳದು ಶಾಂತಿಯನ್ನೂ ॥೧॥

## ಪ್ರಥಮಾಂಕ ಸಮಾಪ್ತ

# ದ್ವಿತೀಯಾಂಕವು

**ಸುಮಂತ**-ಶ್ರೀ ರಾಮಭದ್ರ ಮಹಾರಾಜರಿಗೆ ರಾಜ್ಯವಾಗಬಾರದೆನ್ನುವ ದುರಾಲೋಚನೆಯನ್ನು ಕೈಕಯಾ ಮಹಾರಾಣಿಯವರ ಪರಿವಾರ





**ಕೈಕಯಾ-** ಇರಲಿ ನೀವೆಲ್ಲರೂ ನಿಮ್ಮ ನಿಮ್ಮ ಕೆಲಸಗಳಿಗೆ ಹೋಗಿರಿ

ಗಣವು ಮಾಡುತ್ತಿರುವದೆಂಬ ಸಂಗತಿಯನ್ನು ಕೇಳಿ ಮನಕ್ಕೆ ವಿಪರೀತ ವ್ಯಾಕುಲವುಂಟಾಗಿದೆ. ಶ್ರೀರಾಮಚಂದ್ರ ಮಹಾರಾಜರನ್ನು ಕೌಸಲ್ಯಾ ದೇವಿಯವರಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಕೈಕಯಾರಾಣಿ ಯವರೇ ರಾಮಹಿತವಿಘಾತಕಿಯರಾಗುವರೆಂದು ಕೇಳುತ್ತಿರುವೆನಲ್ಲಾ ಏನುಮಾಡಲಿ ? ದಶರಥ ಮಹಾರಾಜರನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಂಡ ಕೈಕಯಾಮಹಾರಾಣಿಯವರೇ ಹೀಗೆ ವಿಷ ಮಾಲೋಚನೆಯನ್ನು ಮಾಡಿದರೆ ಮಾತ್ರ ಅಶುಭಸಮಯವೇ ಸರಿ. ನೋಡುವಾ ದೇವರಿದ್ದಾನೆ

**ವಶಿಷ್ಠ**-ಏನು ಸುಮಂತನೇ, ವಿಶ್ವಾಮಿತ್ರ, ವಾಮದೇವ, ವಾಲ್ಮೀಕಾದಿ ಮಹರ್ಷಿಗಳು ಬಂದರೇ ?

**ಸುಮಂತ**-ಭಗವಾನ್, ಸಕಲರೂ ದಯಮಾಡಿಸಿದ್ದಾರೆ.

**ವಶಿಷ್ಠ**—

ಚಾಲ್ ॥ ಸುಚತುರೆಧ್ಯೆರ್ಯ

ಸುಗುಣಿಯುಬೇಗನೆಯಾದರಿಸ್ಯೆ । ಸಕಲ ಮಹಾಶಯರನುಪೆಚರಿಸಿ
ಘನತರಮಾದಾಜ್ಞೆನಸಂತೆರು । ಮುನಿಯುಡಿರುವತೆರದೇ ॥ ೧ ॥

**ಸುಮಂತ**- ಆ ವಿಷಯದಲ್ಲಿ ಭಗವಾನರಿಗೆ ಸಂಶಯವೇ ಬೇಡ.

**ವಶಿಷ್ಠ**- ಸರಿ, ಹಾಗಾದರೆ ಮತ್ತೇನು ವಿಶೇಷಾ ?

**ಸುಮಂತ**- ವಿಶೇಷವೇನೂ ಇಲ್ಲ. ಆದರೆ ಭಗವಾನರ ಕಿವಿಗೆ ಒಂದು ಸಂಗತಿ ಬಂದಿಲ್ಲವೆಂದು ತೋರುತ್ತೆ !

**ವಶಿಷ್ಠ**- ಯಾವ ಸಂಗತಿಯದು ?

**ಸುಮಂತ-**

ಚಾಲ್ ॥ ಲಂಗರಧೀಟಿಮದ

ದುರುಳಘೂರ್ತಪರಿವಾರಾ । ನಿರುತದಲಿಗೈಯುತಲಿಹರು । ಘೋರವಿ
ಚಾರವನೂ ಗುರುವೇ । ಒರೆವೆಸಮಾಚಾರಾ ॥ ಶ್ರೀರಾಮನವಶ ರಾಜ್ಯಸೂತ್ರವು ।
ಸೇರಲುಬಾರದು ಯೆಂದಪರೀಗಾ । ಮಿರಿದಸಾಹಸವನು ನಡೆಸಿಹರು । ಘೂರ
ಮಣನಮನ ತಿರುಗಿಸಲೀಗಾ । ಯೋಚಿಸಲೇನಾಲೋಚನೆಯಾ ॥ ೧ ॥

**ವಶಿಷ್ಠ-** ಹೀಗಾಗಬಹುದೆಂದು ನಾನು ಮೊದಲಲ್ಲಿಯೇ ತರ್ಕಿಸಿದ್ದೆನು. ಇರಲಿ, ನಮ್ಮ ಮನೋವಾಂಛಿತವು ನಿರ್ವಿಘ್ನವಾಗಿ ನೆರವೇರುವ ಯಾವಾಲೋಚನೆಯನ್ನು ಮಾಡಿರುವಿರಿ?

**ಸುಮಂತ-** ಶ್ರೀರಾಮಚಂದ್ರ ಮಹಾರಾಜರಿಗೆ ರಾಜ್ಯವಾಗಬಾರದೆನ್ನುವ ದಕ್ಕಾಗಿ ಯಾರೇನಾಲೋಚನೆಯನ್ನು ಹೇಳಿದರೂ ದಶರಥ ಮಹಾರಾಜರು ತಮ್ಮ ನಿಶ್ಚಯವನ್ನು ತಿರುಗಿಸಲಾರರು. ಆದರೂ ಕೈಕಯಾ ಮಹಾರಾಣಿಯವರು ಈ ವಿಷಯದಲ್ಲಿ ಬಿದ್ದಿರುವರೆಂದು ಸ್ವಲ್ಪ ಅನುಮಾನವಾಗುತ್ತಿರುವದು

**ದೂತ-** ಮಹಾರಾಜರೇ, ಕೈಕಯಾ ಮಹಾರಾಣಿಯವರ ಮಂಥರೆಯೆನ್ನುವ ದಾಸಿಯು “ಶ್ರೀ ರಾಮಚಂದ್ರ ಮಹಾರಾಜರಿಗೆ ರಾಜ್ಯ ಭಾರವನ್ನು ಕೊಡುವುದಕ್ಕೆ ಒಪ್ಪಿಗೆಯನ್ನು ಕೊಡಬೇಡಿ; ಬಲವಾಗಿ ‘ನಿರೋಧವನ್ನು ಮಾಡಿರಿ” ಎಂದು ಪ್ರಜಾಜನರಿಗುಪದೇಶವನ್ನು ಮಾಡುತ್ತಾ ಪಟ್ಟಣದ ಬೀದಿಯಲ್ಲಿ ಪಿಶಾಚಿಯಂತೆ ಸಂಚರಿಸುತ್ತಿದ್ದಳು. ಅದನ್ನು ನೋಡಿ ಪಟ್ಟಣಶೆಟ್ಟಿಗಳಾದ ನಾರಾಯಣದಾಸರು ರೊಚ್ಚಿಗೆದ್ದು ಅವಳನ್ನು ತಮ್ಮ ಅಂಗಡಿಯಲ್ಲಿ ಕಟ್ಟಿಹಾಕಿಸಿ ತಮಗೆ ಅರಿಕೆಮಾಡಿಕೊಳ್ಳುವುದಕ್ಕಾಗಿ ನನ್ನನ್ನು ಕಳುಹಿಸಿದ್ದಾರೆ. ಚಿತ್ತಕ್ಕೆ ಬಂದಂತೆ ಮಾಡಬಹುದು

**ಸುಮಂತ**-ಇದೋ ಈಗಲೇ ಬಂದೆನು ನಡೆ ಭಗವಾನ್ ಯುವರಾಜ ರಾಮಭದ್ರ ಮಹಾರಾಜರ ವಿಷಯದಲ್ಲಿ ದ್ರೋಹಮಾಡುವ ಪಾತಕಿಗಳನ್ನು ಶಿಕ್ಷಿಸದೆ ಬಿಡಬಾರದೆಂದು ಕಾಣುತ್ತೆ

**ವಶಿಷ್ಠ**–ಅದೇನೋ ನಿಜ. ಆದರೆ ನೋಡಿ, ಅವಳು ಕೈಕಯಾ ಮಹಾರಾಣಿಯವರ ದಾಸಿಯಂತೆ ಸ್ವಲ್ಪಾಲೋಚನೆಯಿಂದ ಮಾಡತಕ್ಕದ್ದನ್ನು ಮಾಡಿ.

**ಸುಮಂತ**-ಅಜ್ಞಾನಿ ಜನಗಳ ಅಲ್ಪ ವಿಚಾರಗಳನ್ನು ಬೆಳೆಯಗೊಡಬಾರದು; ಅದರಿಂದಾಡಳಿತವೇ ಕೆಟ್ಟು ಹೋದೀತು ಆದಕಾರಣ ತೀವ್ರವೇ ಅವರ ಇತ್ಯರ್ಥವನ್ನು ಮಾಡಿಬರುವೆನು ಅಪ್ಪಣೆಯಾಗಲಿ.

**ವಶಿಷ್ಠ**–ಆಗಲಿ, ಹೋಗಿಬನ್ನಿರಿ ಇಂದಿನತನಕ ಧರ್ಮದಿಂದ ನಡೆದು ಬಂದ ದಶರಥ ಸಮ್ರಾಟನ ಸಾಮ್ರಾಜ್ಯದಲ್ಲ ಕಲಿಯು ತಲೆದೋರಿದನೇ? ಉಪಾಯವಿಲ್ಲ

ಆರಿಂವಲೋಕಮೋಹಿನಿಯೇ

ಅರಿಂವಲಾಗದೂ ವಿಧಿಲಿಖಿತವಿರುವದು । ಒದಗಿರುವುದೇ ಬರುವ ದುರ್ಘಟಪ್ರಸಂಗಗಳ್ ॥ ಪವಿಷಾದಮನವೀ । ನೆನೆದೂ । ಭವದಭಾದೆ । ಗಳನೂ ಸಹಿಸಬೇಕು ॥೧॥

**ಮಂಥರೆ**-(ಅತ್ಯಂತ ಸಿಟ್ಟಿನಿಂದ)

ಕಾಪಿರಾಗ-ಪಂಜಾಬಿ

ಬಿಡಿಸು ಬೇಗ ಬಂಧನದಿಂದೆನ್ನನು । ಮೂಢಾತ್ಮನೆ ನೀನು ಮಾಡದೇ ತಡವನ್ನು ॥ ವಡೆಸದಿರೆನ್ನಯ ನುಡಿಗಳನೀನೂ । ದೃಢವಾಗಿಯೆ ಯಾಳಾಗುವಿನೋಡೆಲೋ ॥ ಆಲೋಚನೆಯನ್ನು ಮಾಡೀಗ ಖಲನೀನೂ ॥ ಅರಿಯದಿದ್ದ ವಿಷಯಂದ

ರಿಯುವೆನಾನೂ । ಪರಮಘೋರವಾದೀ ಮಂಥರೆಯೂ ಸಾಮುಝ್ಯಗಪನೀನೂ ।
ಸರಸಾದಾತಂತ್ರವನ್ನೂ ॥೧॥

**ನಾರಾಯಣದಾಸ**-ಆವ್ ಸುಮಂತಮಾರಾಜ, ದೇಖೊ ಯೆ ಶೂಳೀ ಮಗಳೂ "ರಾಮಗೆ ರಾಜ್ಯ ಆಗನೇ ನಹಿದೇನಾ, ಬಹೂತ್ ಹುಶಾರ್ ಆವನು ಬಾಳಾ ಕೆಡಕಾ ಮನಶಾ ಅದಾವ್, ಪಟ್ಟಾಭಿಷೇಕ ಆದವ್ಯಾಲ್ ನಿಮಗೆ ಭಾಳ ಸತಾಸತಾವ್, ಐಸಾ ಮಾಡತಾವ ವೈಸಾಮಾತತಾವ ಕರೆಕೆ ಹುಚ್ಚುಪಕಡಿಲೋ ಕುತ್ರಿ ಪೈಶಾಯೇ ಹುಚರಾಂಡ ಪುಕಾರತ ತಿರಗತಾವ್.

**ಮಂಥರೆ**-ಏ ಮರ್ಕಟಾ, ಏಕೆ ಬಹಳ ಬೊಗಳುವಿ ? ಹಲ್ಲುಗಳನ್ನು ಮರಿಸೇನು ಜೋಕೆ.

**ನಾರಾಯಣದಾಸ**-ಚುಬ್ಬೈಟ್, ಕಾಗಲಿರಾಂಡ, ನಮದು ರಾಮಾ ಬಡಾ ದೊಡ ಮನಶಾ ಅದಾವ. ಆತನ ನಿಸಬತ ಚುಪಕೇ ಚುಪ್ ಬವಲಾಮಿ ಮಾಡತಾವ ಚೊಟ್ಟರಾಂಡ.

**ಸುಮಂತ**-ಇರಲಿ ಶೆಟ್ಟರೇ, ಅವಳ ಮಾತಿನಕಡೆಗೆ ಚಿತ್ತವನ್ನು ಕೊಡಬೇಡಿ.

**ನಾರಾಯಣದಾಸ**-ನಹಿ ಸುಮಂತಮಾರಾಜ, ಹಮಾರೆ ರಾಮಚಂದ್ರಜೀ ವೈಸಾ ದಯಾಲುಮನಶ್ಯಾ ಯೇ ದುನಿಯಾಮೇ ಕೋನದಾವ ? ಓ ದಶರಥ ಮಾರಾಜಜೀಕಾ ಬಡಾ ಬೇಟಾ ಅದಾವ. ಗಾದೀಕಾ ಹಕ್ಕ ದಾರ ಅದಾವ. ಹಮಾರಾ ಪ್ಯಾರಾ ಅದಾವ ಉಶೀಕೂ ರಾಜ್ಯ ಹೋನಾ ಹಮಾರಾ ಮನಶಾ ಅದಾವ.

**ಮಂಥರೆ**-ಎಲೋ ಅದಾನ್ಯಾ, ಅವನಿಗೆ ರಾಜ್ಯವಾಗುವದನ್ನು ನೀನು ಕನಸಿನಲ್ಲಿಯೇ ನೋಡುವಿಯಂತೆ-ಕನಸಿನಲ್ಲಿ !

**ನಾರಾಯಣದಾಸ**–ದೆಖೊ ದೆಖೊ, ಕೈಶೀ ಕಹತಿ, ಉಲ್ಲುರಾಂಡ.

**ಮಂಥರೆ**-ಹೆಚ್ಚಾಗಿ ಮಾತಾಡಬೇಡ. ಕೈಕಯಾ ಮಹಾರಾಣಿಯವರಿಗೆ ಹೇಳಿ ನಿನ್ನನ್ನು ಸುಣ್ಣದಲ್ಲಿ ಸುಡಿಸೇನು, ಕೋತಿಯೇ.

**ನಾರಾಯಣದಾಸ**–ಅರೆಜಾ ಶೋದಿರಾಂಡ ಅಂಜಿಕಿ ತೋರಸತಾವ ಅಂಜಿಕೀ ? ತ ಕೈಕಯಾರಾಣೀಶಾಬ್ ನಮುಗೇನ ಮಾಡತಾವ ? ತೋ ಹಮುಸಬ್ ಪರಜಾಜನ್ ಮನಿಬಿಡತಾವ್ ಜಿಂದಗಾನಿ ಬಿಡತಾವ್ ಬಹುತ್ ಕ್ಯಾ ಪ್ರಾನಬಿ ಬಿಡತಾವ್. ನೀನೇನ್ ತಿಳಿದಾವ್ ಚೊಟ್ಟಿರಾಂಡ ? ಕಹಾಕಿ ಕಾಗಲಿ.

**ಸುಮಂತ**–ಸೈ ಸೈ ! ರಾಜನಿಷ್ಠಪುರುಷನೇ, ನ್ಯಾಯವಾಗಿ ಹೇಳುವಿ

**ಮಂಥರೆ**–ನೀವೆಲ್ಲರೂ ಒಂದೇ ಮಾಲಿಕೆಯೊಳಗಿನ ಮಣಿಗಳು ! ನಿಮ್ಮ ಕಪಟತಂತ್ರಗಳನ್ನು ನಾನು ಸಂಪೂರ್ಣವಾಗಿ ಬಲ್ಲೆನು. ರಾಮನಿಗೆ ರಾಜ್ಯದ ಸ್ವಾಮಿತ್ವವನ್ನು ಕೊಡಿಸಿ ದಶರಥ ಮಹಾರಾಜರನ್ನೂ, ಭರತಯುವರಾಜರನ್ನೂ, ಮತ್ತೂ ಕೈಕಯಾಮಹಾರಾಣಿಯವರನ್ನೂ ಮೂಲೆಗುಂಪಾಗಿ ಮಾಡಲೆತ್ನಿಸುವಿರಾ ?

**ಸುಮಂತ**-ಎಲೇ, ನೀಚಮನೋವೃತ್ತಿಯ ಪರಿಚಾರಿಕೇ, ಶ್ರೀರಾಮಚಂದ್ರ ಸ್ವಾಮಿಗೆ ರಾಜ್ಯವು ಸಿಕ್ಕಿದ ಮೇಲೆ ಅವರೆಲ್ಲರೂ ಮೂಲೆ ಗುಂಪಾಗುವದಿಲ್ಲ ಇದು ನಿನ್ನ ಸದಸದ್ವಿವೇಕ ಬುದ್ಧಿಗಾದರೂ ಗೊತ್ತುಂಟು. ಆದರ ರಾಮನ ವಶಕ್ಕೆ ರಾಜ್ಯವು ಹೋದಲ್ಲಿ ನಿಮ್ಮಂಥ ಕುಟಿಲ ಸೇವಕರು ಮೂಲೆಗುಂಪಾಗುವಿರೆಂದು ನಿಮ್ಮಗಳಿಗೆ ತಲೆಶೂಲೆಯು ಎದ್ದಿರುವದು. ರಾಮನ ರಾಜ್ಯದಲ್ಲಿ ನಿಮ್ಮಂಥ ಸೇವಕರು ಆತನ ಮಂತ್ರಿಗೆ ಈಗ ನೀನು ಕೊಟ್ಟಂತೆ ಎದುರುತ್ತರವನ್ನು ಕೊಟ್ಟರೆ ತಕ್ಷ

ಣವೇ ಶೂಲಕ್ಕೇರಿಸಲ್ಪಟ್ಟಾರು ರಾಮನ ರಾಜ್ಯದಲ್ಲಿ ನಿಮ್ಮಂಥ ರಾಕ್ಷಸೀ ಮಹತ್ವಾಕಾಂಕ್ಷೆಯ ಸೇವಕರು ರಾಜಮನೆತನದ ಧರ್ಮವಂತ ಮತ್ತು ಸರಲವೃತ್ತಿಯ ಸ್ತ್ರೀ ಪುರುಷರನ್ನು ತಮ್ಮ ಕಪಟ ಜಾಲದಲ್ಲಿ ತೊಡಗಿಸಿಕೊಳ್ಳುವ ಯತ್ನವನ್ನು ಮಾಡುತ್ತಿರುವ ಸಂಗತಿಯು ನಿದರ್ಶನಕ್ಕೆ ಬಂದಕೂಡಲೇ ಶಿರೋಮುಂಡನವನ್ನು ಮಾಡಿಸಲ್ಪಟ್ಟವರಾಗಿ ಗಾರ್ಧಪದಮೇಲೆ ಕುಳ್ಳಿರಿಸಲ್ಪಟ್ಟು ಮೆರೆಸಲ್ಪಟ್ಟಾರು. ಪ್ರಪಂಚಕ್ಕೆ ಪ್ರೀತ್ಯಾಸ್ಪದನಾದ ರಾಮನ ರಾಜ್ಯದಲ್ಲಿ ಧರ್ಮದಿಂದ ನಡೆಯುವ ಪ್ರಜಾಜನರ ಮನೋಭಂಗವನ್ನು ಮಾಡಿ ಅವರನ್ನು ಕುರಿಗಳಂತೆ ಭಾವಿಸಿ ಅವರ ಮೇಲೆ ಮನಸೋಕ್ತ ಅಧಿಕಾರವನ್ನು ನಡೆಸುವ ನಿಮ್ಮಂಥ ಮದೋನ್ಮತ್ತರಾದ ಸೇವಕಾಧಮರು ಸಾಕೇತ ಸಾಮ್ರಾಜ್ಯದಿಂದ ಹೊರಗೆ ಹಾಕಿಸಲ್ಪಟ್ಟಾರು. ಹೀಗೆಲ್ಲವಾಗಿ ರಾಜಪ್ರಜರಲ್ಲಿ ಪಿತಾಪುತ್ರಸಮ್ಮಂಧವು ಉಳಿದು, ನಿಮ್ಮಗಳ ಚಲ್ಲಾಟವು ಕುಗ್ಗಿ ರಾಜ್ಯಭಾರ ನಡೆಸುವವರು ಪ್ರಜರ ಸೇವಕರಾಗಿ ವರ್ತಿಸಬೇಕಾಗುವದೆಂಬುದರ ಚಿತ್ರವು ನಿಮ್ಮ ಕಲ್ಪನಾಚಕ್ಷುಗಳಿಗೆ ಭೀಕರ ಸ್ವರೂಪವನ್ನು ತಾಳಿ ಕಾಣಿಸುತ್ತಿರುವದಂತೇ ನಿಮಗೆ ಇಂತಹ ಘನವಾದ ಹೊಟ್ಟೆಬೇನೆಯು ಎದ್ದಿರುವದು. ಸಾಮ್ರಾಜ್ಯದ ಹಿತಚಿಂತಕತ್ವದ ಆವರಣವನ್ನು ಹೊದ್ದುಕೊಂಡು ಪರ್ಯಾಯದಿಂದ ಅಹಿತವನ್ನು ಮಾಡುವ ನಿಮ್ಮಂಥ ರಾಜದ್ರೋಹಿಗಳು ಬೇರುಂಟೆ? ವಿಚಕ್ಷಣರು ನಿಮ್ಮ ದುರ್ಲಕ್ಷಣಗಳನ್ನು ಆಗಲೇ ತಿಳಿದುಕೊಂಡಿದ್ದಾರೆ. ಆತಃಪರ ಸಾಕೇತ ಸಾಮ್ರಾಜ್ಯದ ಕಾರಭಾರದಲ್ಲಿ ನಿಮ್ಮಂಥವರಿಗೆ ಯಾವಕಾಲಕ್ಕೂ ಮರ್ಯಾದೆಯು ದೊರೆಯದು ಬಿಡಿರಿ, ಇನ್ನು ಮೇಲೆ ನೀವು ನಿಮ್ಮ ದುರಾಲೋಚನೆಗಳನ್ನು ಬಿಟ್ಟು ಬಿಡಿರಿ.

**ಮಂಥರೆ**–ಆದಿರಲಿ, ನೀವು ನನ್ನನ್ನು ಬಿಟ್ಟು ಕೊಡುವುದಿಲ್ಲವೇ ?

**ನಾರಾಯಣದಾಸ**–ಹವಾರೆ ರಾಮಚಂದ್ರಜೀಕಾ ಬದನಾಮಿ ನಹಿಮಾಡ ತಾವ್, ತೋ ಬಿಡತಾವ್.

**ಮಂಥರೆ**-ಸುಮ್ಮನಿರು ಪಶೂ, ನಿನ್ನನ್ನು ನಾನು ಕೇಳುವುದಿಲ್ಲ ಮತ್ತು ನಾನೆಂದಿಗೂ ರಾಮನಿಗೆ ರಾಜ್ಯವಾಗಗೊಡುವುದಿಲ್ಲ

**ಸುಮಂತ**–ಹಾಗಾದರೆ ನಿನ್ನನ್ನು ಬಿಡಲಿಕ್ಕೆ ಮಾರ್ಗವಿಲ್ಲ.

**ಮಂಥರೆ**–ನೋಡಿ, ಹೀಗೆಮಾಡುವುದರಿಂದ ನೀವು ನಿಶೇಷವಾಗಿ ಕೆಟ್ಟು ಹೋದೀರಿ. ಜೋಕೆ

**ಸುಮಂತ**–ಹೀಗೆ ದರ್ಪೋಕ್ತಿವಳನ್ನಾಡಿ ನೀನು ಯೋಗ್ಯತೆಯನ್ನು ಮೀರುತ್ತಾ ನಡೆದಿರುವೆ.

**ಮಂಥರೆ**-ನನ್ನನ್ನು ನಿರ್ಬಂಧಪಡಿಸಿ ನೀವಾದರೂ ಮೇರೆದಪ್ಪಿ ನಡೆದಿರುವಿರಿ.

**ಸುಮಂತ**-ಎಲೇ ದೂತನೇ, ಇವಳನ್ನು ರಾಮಪಟ್ಟಾಭಿಷೇಕವಾಗುವ ಪರಿಯಂತರ ನಿರ್ಬಂಧದಲ್ಲಿಡುವದಕ್ಕಾಗಿ ಕಾರಾಗೃಹಾಧಿಕಾರಿಗೆ ನನ್ನಾಜ್ಞೆಯನ್ನು ತಿಳುಹು

**ಮಂಥರೆ**–ಎಲೋ ಸುಮಂತಾ ?

**ನಾರಾಯಣದಾಸ**–ಚುಬೈಟ್ ಝೂಟೇರಾಂಡ್, ಸುಮಂತಮಹಾರಾಜಕು ಎಲೋ ಎಲೋ ಅಂತಾವ್ ? ಸುಮಂತಮಹಾರಾಜಜೀ, ನಾನು ನನ್ನದೋ ಚಾರ್ ಆದಮಿ ಕೊಡತಾವ್, ಯೇ ಚೊಟ್ಟರಾಂಡಕು ಜೇಲಖಾನೆ ತಕ್ ಖೀಂಚಕೇ ಲೇಜಾನೇಕೇಲೀಯೇ.

**ಸುಮಂತ**-ಆಗಲಿ, ಹಾಗೇಮಾಡಿ

**ನಾರಾಯಣದಾಸ**-ಅರೇ ಯೇ ಗಪ್ಪಾಲೀ, ಶಿದ್ದೂ, ಶಿಂಬಾಜೀ, ತಮಾಮು

ಆವರೇ ಏ ಕಾಗಲಿರಾಂಡ್ಕ್ಯ ಲೇಜಾಕರ್ ಜೇಲತಕ್ ಛೋಡಕೇ ಆಜಾವ್ (ನಾಲ್ಕಾರು ಸೇವಕರು ಬರುವರು)

**ಸುಮಂತ**-ಹೂಂ ತೆಗೆದುಕೊಂಡು ಹೋಗಿ.

**ಮಂಥರೆ**-

ಚಾಲ್-ರಣಗಗನಪವನಸಮುಅವುರಾ

ಹಿಲಜನವ ಮನವಿನಿರ್ಧರಿಸಿ । ಹಲವರಿನು ತುಳಿಸುವ ಕರಿಚರಿಸಿ ।
ಕೆಲವರಜನರ್ಗವ ಸುಧಿಸುತಸೆನೂ ॥ ರಾಮನನು ಪನಕೆಕಳುಹಿಸನಿರುವನೆ ।
ಬಿಮಲಮತಿಭರತನಾನಂತರದೇ । ಸ್ವಾಮಿಯಾಗಿರುವನೆ ಧರಣಿಗೆ ತಾನು ॥೧॥

# ಕೈಕಯಿಯಾ ಮಹಾಲ್

**ದಶರಥ**-(ಬರಬರುತ್ತಾ)

ಚಾಲ್-ಧಾಟನಮರಿಚಾದಾವಿನಟ

ಶಾಂತೆಯುಮಮ ವಿಶ್ರಾಂತಿಗಾಗಿ ತಾ। ಸೆಂತು ಹಿಂಗಿಸಿದೆಳೇನುಯಿ
ರವಾ । ತ್ಯಂತಶ್ರಮಹಿಂದಾ ॥ ಪ್ರಶಸ್ತತೇ ಬಹುದಾಮನಕೇ । ಭಾಸುರವಾ
ಹಾ ಯಿಸೂಬಗನುಸೋ । ಡೀಸಮಂದೊಳೂ ಬೇನರಿವೆನಗೆ ಹೊಸವು ತ್ರಿಯ
ಶಾ । ಮಾಸದಾಯಿತ್ತೈ ॥೧॥

**ಕೈಕಯಾ**-(ಹಾರವನ್ನು ಕೊರಳಲ್ಲಿ ಹಾಕಿ) ಪ್ರಿಯಕರಾ, ಶ್ರೀರಾಮಚಂದ್ರ ಪಟ್ಟಾಭಿಷೇಕ ಮಹತ್ಕಾರ್ಯದ ಏರ್ಪಾಟುಗಳಲ್ಲಿ ತಮಗೆ ವಿಶೇಷ ಶ್ರಮವಾಗುತ್ತಿರುವದು ಅದರ ಪರಿಹಾರಾರ್ಥವಾಗಿ ಇಂತಿಷ್ಟು ಏರ್ಪಾಟುಗಳನಿಟ್ಟಿದ್ದೇನೆ.

**ದಶರಥ**-ಇಂತಹ ಕುಶಲಮತಿಯಂತೇ ಮಿಕ್ಕರಾಣಿಯರಿಗಿಂತಲೂ ನಿನ್ನ ಮೇಲೆ ನನ್ನ ದತಿಶಯವಾದ ಪ್ರೇಮವಿದೆ ಇರಲಿ ಪ್ರಿಯೇ, ನಿನ್ನ ಈ ಶ್ರಮಕ್ಕೆ ತಕ್ಕ ಪಾರಿತೋಷಕವನ್ನೇನು ಕೊಡಲಿ ಹೇಳು.



೨೬

ಮಂಥರೆ- ಖಲಜನವೆ ಮನದಿನಿರ್ಧರಿಸಿ।

**ಕೈಕೆಯಾ**-ಪಾರಿತೋಷಕದ ಸಲುವಾಗಿ ನಾನು ಶ್ರಮಪಟ್ಟಿಲ್ಲವಲ್ಲಾ. ತಮ್ಮ ಶೇವೆಯನ್ನು ಮನಃಪೂರ್ವಕವಾಗಿ ಮಾಡುವದೇ ನನ್ನ ಪವಿತ್ರವಾದ ವ್ರತವು. ಇರಲಿ, ಮನೋಹರಾ, ತಮ್ಮ ಮನೋಭಂಗವನ್ನಾದರೂ ಏತಕ್ಕೆ ಮಾಡಬೇಕು ಪಾರಿತೋಷಕವನ್ನೇ ಕೊಡುವದಾದರ ಮೊದಲೊಂದುಸಾರಿ ಕೊಡುವೆನೆಂದು ಹೇಳಿದ್ದನ್ನೇ ಕೊಟ್ಟು ಪೂರ್ಣ ಮಾಡಿಬಿಡಿ.

**ದಶರಥ**-ಮೊದಲೊಂದು ಸಾರಿ ನಿನಗೇನು ಕೊಡುವೆನೆಂದು ಹೇಳಿದ್ದೆನು ?

**ಕೈಕೆಯಾ**-ಆ ಸಂಗತಿಯು ಈಗಾಗಲೇ ಮರೆತು ಹೋಯಿತೆ ?

**ದಶರಥ**-ನಿಜವಾಗಿ ನನಗೆ ಜ್ಞಾಪಕವಿಲ್ಲ ಹೇಳು ಹೇಳು, ಎಂದು ಏನು ಕೊಡುವೆನೆಂದು ಹೇಳಿದ್ದನು ?

**ಕೈಕೆಯಾ**- ಚಾಲ್-ರೂಪಭಲೀನರಶಾರ್ದೂಲಸಾಚಾ

ಆದಿನದೀಂಯೆನಗೇ ಕ್ಷಿತಿಪಾಲಾ । ಮುದದಿಸೀಡಿದೀವರಯುಗ್ಮವಿಮಲಾ ।
ರಥಾಂಗವನ್ನೊ । ನಾತವೆಯುಲದಿತೀ । ಏತಿಸುತರಕವನಾವೆನೆಳ್ ತಾವಿರಲು ॥

**ದಶರಥ**-ವರಫಲಗಳನ್ನು ಪೂರ್ಣಮಾಡಿಕೊಳ್ಳುವದು ಸಂಕಟಸಮಯದಲ್ಲಿ ಈಗ್ಗೆ ನೀನು ಕೇವಲ ಆನಂದಪರಿಸ್ಥಿತಿಯಲ್ಲಿರುವೆ. ಹೀಗಿರಲು ವರಫಲಗಳಿಂದ ಪಡೆಯುವ ಹೆಚ್ಚಿನ ಸೌಭಾಗ್ಯವೇನು ?

**ಕೈಕೆಯಾ**-ಹಾಗಿರುವದಂತೇ ಕೇಳುತ್ತಿರುವೆನು.

**ದಶರಥ**- ಚಾಲ್-ಪ್ರಿಯಸೋಕ್ಷಾಹುನಿಹೀ

ಜಪಜಾತಾನನೆಯೋ ಪೂರೆಯೋಜಾಯೀ । ಬೇಡುವಂತಹವನಿವಪ್ಪಿಯೇ ।
ಪೊವವಿಯುಸಿರಿಯೋ ನಿನ್ನದಲ್ಲವೇ ॥ ಭೂವರನೂ ಯಾವಾಗಲಿರಲುತವ ।
ಸೇವೆಯೊಳೀನಾವುದನ್ಯೂನತೆಂಶೀ ॥೧॥

**ಕೈಕಯಾ**-ಏನಾದರೂ ಈಗ್ಗೆ ನಾನು ವರಫಲಗಳನ್ನು ಪಡಿಮುಕೊಳ್ಳಲೀ ಬೇಕಾದ ಸಂದರ್ಭವುಂಟಾಗಿದೆ.

**ದಶರಥ**-ಆಗಲಿ, ಹಾಗೇ ಮಾಡು.

**ಕೈಕಯಾ**-ನೋಡಿ, ಕೇಳಲೋ ?

**ದಶರಥ**-ಆಗಲಿ, ಕೇಳಿಕೋ

**ಕೈಕಯಾ**-ತಮ್ಮಿಂದ ಕೊಡುವದಾಗದಿದ್ದರೆ ?

**ದಶರಥ**-ಏನು. ಹೀಗೇನು ಹೇಳುವೆ ? ಸೂರ್ಯವಂಶ ಸಂಭೂತರು ವಚನಕ್ಕೆ ತಪ್ಪಿ ನಡೆಯುವರೇ ?

ಚಾಲ್-ಪ್ರಾಣಸಖೀಬಸಲೀ

ಏನುವಚಿಸುತಿರುವೇ | ಮನೋಹರಿ ॥ ಮೀರಿನಡೆಯುವರೆ | ಈ ರವಿ
ಕುಲದಾ | ವೀರರುವಚನವನೂ | ಅಚಲಾಚಲಿಸುವದೊಂದು ಸಮಯುವೇ |
ವಚನಕೆ ತಪ್ಪುವರೇ ॥ ಮನೋಹರೇ ॥೧॥

**ಕೈಕಯಾ**-ಅದರ ಪರೀಕ್ಷೆಯು ಈಗ್ಗೆ ಇಷ್ಟರಲ್ಲಿಯೇ ಆಗಿ ಹೋಗುವದು. ನೋಡಿ.

**ದಶರಥ**-ಏನಿದು ! ನನಗೆ ನಡೆಸಲಿಕ್ಕೆ ಸಾಧ್ಯವಿಲ್ಲದ ಸಂಗತಿ ಯಾವದಿರುವದು ? ಕೈಕಯಿ ಏತಕ್ಕೆ ಸಂಕೋಚಪಡುವೆ ? ನನ್ನ ಪ್ರಾಣನಾದ ರಾಮನ ಪಟ್ಟಾಭಿಷೇಕ ಸಮಯದಲ್ಲಿ ನಿನಗೆ ಸಂಭ್ರಮಕ್ಕಾಗಿ ಕುಳಿತು ಕೊಂಡು ತಿರುಗಾಡಲಿಕ್ಕೆ ಇಂದ್ರನೈರಾವತವು ಬೇಕಾಗಿದ್ದರೆ ಹೇಳು, ತರಿಸಿಕೊಡುವೆನು. ಮುತ್ತುರತ್ನಾದಿಗಳು ಬೇಕಾಗಿದ್ದರೆ ಹೇಳು, ಸಮುದ್ರನಾಥನ ಬೊಕ್ಕಸವನ್ನೇ ತಂದು ಚೆಲ್ಲಿಸುವೆನು. ಕಾಮ

ಧೇನು ಕಲ್ಪವೃಕ್ಷಾದಿಗಳು ಬೇಕಾದರೆ ಅವುಗಳನ್ನು ಸಹಾ ಬರಮಾಡಿಸುವೆನು ಹೇಳುಹೇಳು, ಸಂಕೋಚಪಡಬೇಡ

**ಕೈಕಯಾ-** ಹೇಳಲೋ? ಹೇಳುವೆನು ಕೇಳಿ (ನಾಲಿಗೆಯನ್ನು ಕಚ್ಚಿಕೊಂಡು) ಛೀ! ಬೇಡಾ ನಿಮ್ಮಿಂದ ನಡೆಸುವದಾಗಲಿಕ್ಕಿಲ್ಲಾ; ಕೇಳುವದೇ ಬೇಡಾ

**ದಶರಥ-** ಇವಳಿಗಿನ್ನೇನು ಹೇಳಬೇಕು! ಪ್ರಿಯೇ, ಮನೋಭಂಗವನ್ನು ಮಾಡಿಕೊಳ್ಳಬೇಡಾ ಈ ರಾಮಪಟ್ಟಾಭಿಷೇಕ ಸಮಯದಲ್ಲಿ ನೀನು ವಿಮನಸ್ಕಳಾಗಿರುವದು ನನಗೆ ಸರಿಯಾಗದು ಏನಿದ್ದ ಇಷ್ಟಾರ್ಥ ಯಾಚಿಸು; ಪೂರ್ಣಮಾಡುವೆನು

**ಕೈಕಯಾ-** ಬೇಡಾ! ಏನೂ ಬೇಡಾ!

**ದಶರಥ-** ಛೀ! ಹಾಗೆಂದರೇನು? ಮನಸ್ಸಿನಲ್ಲಿರುವವನ್ನು ನೀನು ತಿಳುಹಲೇಬೇಕು; ನಾನವನ್ನು ಪೂರ್ಣಮಾಡಲೇಬೇಕು.

**ಕೈಕಯಾ-** ಹೇಳಲೋ?

**ದಶರಥ-** ಹೇಳು.

**ಕೈಕಯಾ-** ನಡೆಸುವೆನೆಂದು ವಚನವನ್ನು ಕೊಡಿ

**ದಶರಥ-** ಇದೋ ತೆಗೆದುಕೋ ವಚನವನ್ನು - ಖಂಡಿತವಾಗಿ ನಿನ್ನ ಮನೋಭೀಷ್ಟವನ್ನು ಪೂರ್ಣಮಾಡುವೆನು.

**ಕೈಕಯಾ-**

ಚಾಲ್ ‖ ಲಾವಿಚಟಕಗುಣಗಾನ

ನೀಡು ಭರತನಿಗೆ ರಾಜ್ಯ | ಮಹಾರಾಜಾ | ಆ ರಾಮನು ತಾ ಸೇರಲು ಬೇಕು | ವರುಷಚತುರ್ದಶವನವೇ | ಮಹಾರಾಜಾ ‖ ೧ ‖

**ದಶರಥ-** ಏನು ಹೀಗೆ ಹೇಳುವ ನೀನು ಕೈಕಯಿಯೇ?

**ಕೈಕಯಾ-** ಅಹುದು

**ದಶರಥ-** ಇಂದಿನತನಕ ಶ್ರೀರಾಮಚಂದ್ರನನ್ನು ಪ್ರೇಮದಿಂದ ಸಲಹಿದ ಕೈಕಯಿಯೇನು?

**ಕೈಕಯಾ-** ಅಹುದು! ಅಹುದು!! ಅಹುದು!!!

**ದಶರಥ-** ಅಲ್ಲ, ಅಲ್ಲಾ, ನೀನು ನಿರ್ಮಲಾಂತಃಕರಣೆಯಾದ ಕೈಕಯಿಯೇ ಅಲ್ಲಾ.

**ಕೈಕಯಾ-** ಅದೇಕೆ?

**ದಶರಥ-** ಯಾಕಂದರೆ ನನ್ನ ಕೈಕಯಿಯು ಶ್ರೀರಾಮಚಂದ್ರನನ್ನು ದ್ವೇಷಿಸ ತಕ್ಕವಳೇ? ನನ್ನ ನವನೀತ ಸಮ ಕೋಮಲಮನಸ್ಸಿನ ಕೈಕಯಿಯು ರಾಮನು ವನವಾಸಿಯಾಗಬೇಕೆಂದಪೇಕ್ಷಿಸುವ ಕಠಿನ ಮನಸ್ಸಿನವಳೆ?

**ಕೈಕಯಾ-** ಇದೋ ಹಾಳು ರಗಳೆಯನ್ನು ನನ್ನ ಮುಂದೆ ಹೇಳಬೇಡಿ. ವಚನಕ್ಕನುಸರಿಸಿ ನಡೆಯುವಿರೋ ಇಲ್ಲವೋ-ಅಷ್ಟೊಂದು ಹೇಳಿಬಿಡಿ

**ದಶರಥ-**

ಚಾಲ್-ಇವನೇಗಿರಿಜಾರಮಣನೇ

ಛಲವಾರಾಮನೊಳು ಬೇಡ | ಲಲನೇ ದಯದಿಂದನೋಡೆ ॥ ಕುಲೀನಾಂಗನೆಯು ನೀನಾಗಿ | ಈ ಕೀಳಾಲೋಚನೆಯಾಚಿಪೆ ॥೧॥ ಮೊಲೆಯೂಡು ನೀಡಾಸುತಗೆ ॥ ಹಾಲಾಹಲವನು ಕೊಡುವೆಯೇನೆ ॥೨॥

**ಕೈಕಯಾ-** ಹೀಗೆ ಬಣ್ಣದ ಮಾತುಗಳನ್ನು ಸುರಿಸುವುದು, ಬೇಡಿರಿ. ನನ್ನ

ಭರತನಿಗೆ ಸಾಕೇತ ನಗರದ ಪಟ್ಟವಾಗಲಿಕ್ಕೇ ಬೇಕು; ಮತ್ತೂ ರಾಮ
ನಿಗೆ ಹನ್ನೆರಡು ವರ್ಷ ವನವಾಸವಾಗಲಿಕ್ಕೇಬೇಕು

**ದಶರಥ**-ಅಯ್ಯೋ ! ಈ ಹೃದಯ ವಿದಾರಕಗಳಾದ ವಚನಗಳನ್ನು ಹೇಗೆ
ಕೇಳಲಿ ? ರಾಮನು ವನವಾಸಿಯಾಗಬೇಕೇ ?

**ಕೈಕಯಾ**-ಅಹುದು, ಅಹುದು, ಆಗಲಿಕ್ಕೇಬೇಕು

**ದಶರಥ**-ಥೂ ! ಕರ್ಕಶಾ.

ಚಾಲ್-ಲೋಚನಾಂಬುಧಾರಾನೀಹೇ

ಥೂ ಮದಾಂಧನಾರಿ। ರಾಮನ ಹಿತವನು ನೆನೆಯುವೆಯಾ ॥ ಸೇದಿ
ಹೋಗದೇತಕೇ ನಿನ್ನಯಾ। ಅದುರ್ವಾಕ್ಯವ ನುಡಿದ ಜಿಹ್ವೆಯು। ಮಾಧವಾವ
ತಾರನಂ ವೈರಿಸುವಿಯಾ ॥೧॥

**ಕೈಕಯಾ**-ಅಮ್ಮಮ್ಮಾ ! ಕೊಟ್ಟ ವಚನವನ್ನು ಪಾಲಿಸುವುದಕ್ಕಾಗಿ ಇಷ್ಟೊಂ
ದು ಪರಿತಾಪವೇ ? ಆಗುವದಿಲ್ಲವೆಂದು ಹೇಳಿಬಿಡಿ. ನಾನೆಲ್ಲಿ ನಿಮಗಾ
ಗ್ರಹವನ್ನು ಮಾಡುತ್ತಿರುವೆನು ?

**ದಶರಥ**-ಆಗುವದಿಲ್ಲ ನಡೆ ನೀಚ ನಾರೀ, ನನ್ನ ಭಾಗ್ಯ ರವಿಯಾದ ರಾಮ
ಚಂದ್ರನ ಅಹಿತ ಚಿಂತನೆಯನ್ನು ಮಾಡುವೆಯಾ ? ಯಾವಕಾಲಕ್ಕೂ
ನಿನಗೆ ಕೊಟ್ಟ ವಚನವನ್ನು ನಡೆಸುವದಾಗುವದಿಲ್ಲ. ನಡೆ, ನಿನ್ನ
ಮುಖಾವಲೋಕನವೇ ಬೇಡ.

**ಕೈಕಯಾ**-ಏನು ನೀವು ಸೂರ್ಯವಂಶೀಯರೇ ? ನಿಮಗೆ ಸೂರ್ಯವಂಶೀಯ
ರೆಂದಾರು ಹೇಳುವರು ? ನೀವು ಯಾವದೋ ಒಂದು ಹೀನವಂಶೀಯರು

**ದಶರಥ**-ಸುಮ್ಮನಿರು ಮಾರಿ. ಸೂರ್ಯ ವಂಶವನ್ನು ನಿಂದಿಸುವಿಯಾ ?

**ಕೈಕಯಾ**-ಕೊಟ್ಟ ವಚನವನ್ನು ನಡೆಸಲಾರದ ನಾಲಿಗೆಯು ಸೂರ್ಯವಂಶೀಯರದೇ ?

**ದಶರಥ**-ಅಯ್ಯೋ ! ವಚನವನ್ನು ಕೊಟ್ಟಿರುವೆನಲ್ಲಾ ಏನು ಮಾಡಲಿ ? ಪ್ರಿಯೇ ಕೈಕಯೀ, ಬೇಡ, ಬೇಡ; ಹೀಗೆ ನಿರ್ದಯಳಾಗಬೇಡ ಭರತನಿಗೆ ಬೇಕಾದರೆ ಪಟ್ಟಗಟ್ಟಿಸುವೆನು; ಕೇವಲ ನನ್ನ ಪ್ರಾಣನಾದ ರಾಮನನ್ನು ವನವಾಸಕ್ಕಟ್ಟುವ ಆಗ್ರಹವನ್ನು ಬಿಟ್ಟುಕೊಡು ಅವನು ಕಣ್ಣುಮರೆಯಾದರೆ ನನ್ನ ಪಂಚ ಪ್ರಾಣಗಳೇನೂ ನಿಲ್ಲಲಿಕ್ಕಿಲ್ಲ

**ಕೈಕಯಾ**-ಹಾಗಾದರೂ ಪರವಿಲ್ಲಾ ಅವನು ವನವಾಸಕ್ಕೆ ಹೋಗಲೇಬೇಕು

**ದಶರಥ**-ಧೂ ! ನಿರ್ದಯಾ, ನಿನ್ನನ್ನು ಸೀಳಿ ಒಗೆಯಲೇ ? ಪುತ್ರನನ್ನು ವನವಾಸಕ್ಕೆ ಕಳುಹಿ ಪತಿಯ ಪ್ರಾಣವನ್ನು ತೆಗೆದು ಕೊಳ್ಳಲಪೇಕ್ಷಿಸುವ ನೀನಾವ ಕೋಟೆಯವಳೇ ?

**ಕೈಕಯಾ**-ನಾನಾವ ಕೋಟೆಯವಳೇ ಇರಲಿ, ನುಡಿದಂತೆ ನಡಿಯುವದಾಗದೇ ಡೋಕಾರಿತನವನ್ನು ನಟಿಸುವ ನೀವಾವ ಕೋಟೆಯವರು ? ಅದನ್ನು ಮೊದಲು ಹೇಳಿ ಆನಂತರ ನನ್ನನ್ನು ಕೇಳಿ; ಉತ್ತರಿಸುವೆನು

**ದಶರಥ**-ಅಯ್ಯೋ ! ಸರ್ವಸ್ವೀ ಘಾತವಾಯಿತು.

**ಕೈಕಯಾ**-ಅದೇಕೆ ? ಭರತನಿಗೆ ಪಟ್ಟಗಟ್ಟಿಸುವದರ ಸಲುವಾಗಿ ಹೇಳಿದರೆ ಮಾತ್ರ ಘಾತವಾಯಿತೆ ? ರಾಮನಿಗೆ ಪಟ್ಟವಾದರೆ ಮಾತ್ರ ಘಾತವಾಗುತ್ತಿರಲಿಲ್ಲ ಆ ರಾಮನಿಗೆ ಪಟ್ಟಗಟ್ಟಿ ನನ್ನ ಭರತನನ್ನು ಅಡವಿಪಾಲು ಮಾಡುವ ಆಲೋಚನೆಯು ಮಾತ್ರ ವಿಹಿತವಾದಾಲೋಚನೆಯಲ್ಲವೆ !

**ದಶರಥ**-ನಿಶ್ಚಯವಾಗಿ ಪ್ರಿಯೇ ನಿನ್ನ ಭರತನನ್ನು ರಾಮನು ಯಾವಕಾಲಕ್ಕೂ

ಅಡವೀಪಾಲು ಮಾಡನು ಸಕಲರನ್ನೂ ಸಮಭಾವದಿಂದ ನೋಡುವ ನನ್ನ ರಾಮನು ತನ್ನ ಸಹೋದರನಾದ ಭರತನೊಡನೆ ಮೋಸ ಬಳಿಸ ತಕ್ಕವನೆ ? ದಯಾರ್ಣವನಾದ ನನ್ನ ಕೌಸಲ್ಯಾಸಂಜಾತನು ರಾಜ್ಯ ಮದದಿಂದ ಬಂಧು ಬಾಂಧವರನ್ನು ಬಳಲಿಸತಕ್ಕವನೇ ? ಅಲ್ಲದೆ ಧರ್ಮ ಶಾಸ್ತ್ರ ದೃಷ್ಟಿಯಿಂದಲಾದರೂ ನನ್ನ ನೀಲಮೇಘಶ್ಯಾಮನಾದ ರಾಮನೇ ಪಟ್ಟಕ್ಕೆ ಬಾಧ್ಯನಲ್ಲವೇ ? ಹೀಗಿರಲು ರಾಮನಿಗೆ ರಾಜ್ಯ ವಾಗಬಾರದೆಂದಾಲೋಚಿಸುವ ನಿನ್ನಾಲೋಚನೆಯು ವಿಹಿತವಾದದ್ದೇ ನೋಡು ತಿಳಿದವಳಿರುವೆ, ವಿಚಾರಮಾಡಿ ನೋಡು

**ಕೈಕಯಾ**- ಪೂರ್ವಾಪರ ವಿಚಾರಮಾಡಿರುವೆನಂತೇ ಭರತನಿಗೆ ರಾಜ್ಯ ವನ್ನೂ ರಾಮನಿಗೆ ವನವಾಸವನ್ನೂ ಬೇಡಿರುವನು ಕೊಡುವದಾದರೆ ಕೊಡಿ, ಇಲ್ಲವಾದರೆ ಖಂಡಿತವಾಗಿ ಆಗುವದಿಲ್ಲವೆಂದು ಹೇಳಿಬಿಡಿ ರವಕನೆಯೇಕೆ ?

**ದಶರಥ**- ಏನು ರಾಕ್ಷಸೀ ರಾಜ್ಯಲೋಭವಿದು ! ಸುಕುಲೋದ್ಭವಿಯಾದ ನಿನಗೀ ಬುದ್ಧಿಯು ಎತ್ತಿಂದ ಬಂತು ? ಲೋಕದಲ್ಲಿ ಸಾಕ್ಷಾತ್ ನಾರಾ ಯಣಾವತಾರಿಯೆಂದೆನಿಸಿಕೊಳ್ಳುವ, ಸಾಕೇತ ಸಿಂಹಾಸನಕ್ಕೆ ಬಾಧ್ಯ ನಾದ, ಶ್ರೀರಾಮಭದ್ರನ ದ್ರೋಹವನ್ನು ಮಾಡುತಕ್ಕ ನೀನು ಆಚಂದ್ರಾರ್ಕ ಬಾಳಿರುವಯಾ ? ಇಲ್ಲ, ಇಲ್ಲಾ ನಿಶ್ಚಯವಾಗಿ ನೀನು ಆಚಂದ್ರಾರ್ಕ ಬಾಳಿರುವುದಿಲ್ಲ. ಎಂದಾದರೂ ಸಾಯತಕ್ಕವಳೇ ಹೀಗೆ ನಶ್ವರದೇಹಧಾರಣಿಯಾದ ನೀನು ಏತಕ್ಕೆ ಪಾಪಾಚರಣೆಯನ್ನು ಮಾಡುವೆ ? ರಾಮನು ನಮ್ಮ ಭಾಗ್ಯರವಿಯು; ಆತನಿಂದಲೇ ನಾವು ಘನತೆಯನ್ನು ಹೊಂದಿರುವವು ಕೈಕಯೇ, ನೀನು ಸವತಿಮತ್ಸರ ಭಾವದಿಂದ ಪರಿವಾರಗಣದ ದುರ್ಬೋಧಗಳನ್ನು ಕೇಳಿ ಕೇಳಿ ದೂಷಿ ತಾಂತಃಕರಣಿಯಾಗಿ ಹೀಗೆ ಮಾತುಗಳನ್ನಾಡುತ್ತಿರುವೆ ಇದು ಯಾವ

ಕಾಲಕ್ಕೂ ಹಿತವನ್ನುಂಟುಮಾಡಲಾರದು ಈ ನಿನ್ನ ದುರ್ವಿಚಾರ ದಾವಾಗ್ನಿಯಿಂದ ಇಂದಿನ ತನಕ ನಾನು ಪುತ್ರವತ್ಪರಿಪಾಲನೆಯನ್ನು ಮಾಡಿದ ಸಾಕೇತಸಾಮ್ರಾಜ್ಯದ ಪ್ರಜಾಜನರ ಮನೋವನವು ಸುಟ್ಟು ಹೋಗುವದು. "ಶ್ರೀರಾಮನು ರಾಜ್ಯದ ಸ್ವಾಮಿಯಾಗುವನು; ಸತ್ವ ಗುಣ ನಿಧಿಯಾದ ರಾಮನು ರಾಜ್ಯದ ಸ್ವಾಮಿಯಾಗುವನು; ನಿಷ್ಕ ಲಂಕ ಚಿತ್ತನಾದ ರಾಮನು ರಾಜ್ಯದ ಸ್ವಾಮಿಯಾಗುವನು, ದಯಾ ಗುಣ ಪರಿಪೂರ್ಣನಾದ ರಾಮನು ರಾಜ್ಯದ ಸ್ವಾಮಿಯಾಗುವನು, ತಮ್ಮ ಜೀವದಾಪ್ತಸಮಾನನಾದ ರಾಮನು ರಾಜ್ಯದ ಸ್ವಾಮಿ ಯಾಗುವನು. ನಮ್ಮ ದೈವಗಳು ತೆರವವು, ನರಲೋಕವು ಸುರ ಲೋಕಕ್ಕಿಂತಲೂ ವರಿಷ್ಟವೆನಿಸುವದು ಸಾಕೇತಸಾಮ್ರಾಜ್ಯವು ಸತ್ಯದ ಬೀಡಾಗುವುದು,-ಎಂದು ಆನಂದದಿಂದ ಪ್ರೇಮಾತುರ ರಾಮ ಪಟ್ಟಾಭಿಷೇಕವನ್ನು ನೋಡಲಾತುರಪಡುವ ಪ್ರಜಾಜನರ ಮನೋ ಭಂಗವನ್ನು ಹೇಗೆಮಾಡಲಿ? ಕೈಕಯೇ, ನನ್ನ ಸಲುವಾಗಿ ಬೇಡವೇ ಬೇಡ ನಿನ್ನ ಭರತನ ಸಮಾನರಾದ ಪ್ರಜರ ಕಡೆಗಾದರೂ ನೋಡು. ರಾಮನಿಗೆ ಪಟ್ಟವಾಗುವದೆಂದು ಹೇಗೆ ನಗರವನ್ನು ಸಿಂಗರಿಸಿರುವರು ಧ್ವಜಪತಾಕಾದಿಗಳನ್ನೇನು ಕಟ್ಟಿರುವರು! ಬೀದಿಬೀದಿಗೆ ಪನ್ನೀರಿನ ಥಳಿಯನ್ನೇನು ಕೊಟ್ಟಿರುವರು! ಸ್ಪರ್ಧೆಯಿಂದ ರಂಗವಲ್ಲಿಗಳನ್ನೇನು ಹಾಕಿರುವರು! ದೀಪೋತ್ಸವದ ಸಿದ್ಧತೆಯನ್ನೇನು ಮಾಡಿಕೊಂಡಿರು ವರು! ವಿವಾಹ ಮಹೋತ್ಸವದಲ್ಲಿ ತೊಡಗಿದವರಂತೆ ನಿರಲಸವಾಗಿ ದುಡಿದು ದುಡಿದು ರಾಮಪಟ್ಟಾಭಿಷೇಕ ಮಹೋತ್ಸವವನ್ನು ನಿರೀಕ್ಷಿ ಸುತ್ತಿರುವರು. ಅವರಿಗೆ ಈ ನಿನ್ನ ವಿಚಾರಗಳು ತಿಳಿದರೇನಾದೀತು?

**ಕೈಕಯಾ**-ಆಗುವದೇನು? ಸಕಲರೂ ರೊಚ್ಚಿಗೆದ್ದು ನನ್ನ ಮೇಲೆಯೂ ನನ್ನ ಭರತನ ಮೇಲೆಯೂ ಮತ್ತು ನನ್ನ ಪರಿವಾರದ ಮೇಲೆಯೂ ಸಾಗಿ

ಬಂದು ಎಲ್ಲರನ್ನೂ ನಾಶಮಾಡುವಾಲೋಚನೆಯನ್ನು ಮಾಡ್ಯಾರು. ಮತ್ತೇನು ಮಾಡುವರು ?

**ದಶರಥ**–ಥೂ ! ಏನು ಹೀನಮಾತುಗಳನ್ನಾಡುವೆ ? ನನ್ನ ಪ್ರಜರನ್ನು ನೀನು ಶ್ವಾಪದಗಳೆಂದು ಭಾವಿಸಿದೆಯೋ ? ಸದ್ಧರ್ಮರತರಾದ ನನ್ನ ಸಾಕೇತ ಜನರನ್ನು ರಕ್ಕಸರಂದು ತಿಳಿದುಕೊಂಡಿಯಾ ? ನನ್ನ ಪ್ರಜಾಜನರು ನನ್ನನ್ನು ವಿಶ್ವಾಸದಿಂದ ವಿಷ್ಣುಸ್ವರೂಪದಲ್ಲಿ ನೋಡುತ್ತಿರುವರು. ನನ್ನ ಬಂಧುಬಾಂಧವ ಆಪ್ತೇಷ್ಟಪರಿವಾರವನ್ನು ಜಯವಿಜಯ ಶಂಖಚಕ್ರ ಗದಾಪದ್ಮ ಮೊದಲಾದ ಶ್ರೀಮನ್ನಾರಾಯಣನ ಸುಚಿಹ್ನಗಳ ಸ್ವರೂಪಗಳಲ್ಲಿ ನೋಡುತ್ತಿರುವರು. ರಾಜನು ತಮ್ಮ ಮನಸ್ಸಿನ ವಿರುದ್ಧವಾಗಿ ಆಚರಿಸಿದರೆ ಗುಂಪುಗುಂಪಾಗಿ ಎದ್ದು ಪಿಶಾಚಿಗಳಂತೆ ಅವನ ಮೇಲೆ ಸಾಗಿ ಪವಿತ್ರವಾದ ಅವನ ಪ್ರಾಣವನ್ನು ತೆಗೆದುಕೊಳ್ಳುವ ರಾಕ್ಷಸ ವೃತ್ತಿಯುವರು ನನ್ನ ಪ್ರಜಾಜನರಲ್ಲ. ನನ್ನ ಪ್ರಜರು ಕೇವಲ ಧಾರ್ಮಿಕರು; ನಾವು ಅವರ ಮೇಲೆ ಬೇಕಾದ ನ್ಯಾಯಗಳನ್ನು ಮಾಡಿದರೂ ಸಹನ ಮಾಡಿಕೊಳ್ಳತಕ್ಕವರು ನೀನು ದುರ್ಧೈರ್ಯವಿಯಾಗಿದ್ದರೆ ನನ್ನ ಪ್ರಜಾಜನರ ಸತ್ವಪರೀಕ್ಷೆಯನ್ನು ಮಾಡುವೆ ರಾಮನಿಗೆ ರಾಜ್ಯವನ್ನು ಕೊಡದೆ ಅವನನ್ನು ದರಿದ್ರನನ್ನು ಮಾಡಿ ಅಡವಿಗೆ ಕಳುಹಿಸುವ ಪರಮಾವಧಿಯ ನೀಚಕರ್ಮವನ್ನು ಮಾಡಿದಾಗ್ಯೂ ಆ ಸಮಯದಲ್ಲಿ ನನ್ನ ಪ್ರಜರೇನು ಮಾಡುವರು ಬಲ್ಲೆಯಾ?

**ಕೈಕಯಾ**- ಏನು ಮಾಡುವರು?

**ದಶರಥ**- ಕಲ್ಪನಾತೀತವಾದ ನಿರಾಶೆಯಾದದ್ದಕ್ಕೆ ಕಣ್ಣೀರು ಸುರಿಸಿ ಸುರಿಸಿ ದೇವರಿಗೆ ಮೊರೆಯಿಟ್ಟಾರು–ದೇವನೇ, ಅತಿ ಕಠೋರವಾದ ರಾಕ್ಷಸೀ ಮಹತ್ವಾಕಾಂಕ್ಷೆಯ ಮಯವಾದ ಮತ್ತು ನರಕಕ್ಕೆ ಸಮಾನವಾದ

ಈ ಭೂಮಿಯಿಂದ ಬೇಗನೆ ನಮ್ಮನ್ನು ತೆಗೆದುಕೊಂಡುಹೋಗಿ-ನಿನ್ನ ಅನಂತವಾದ ಬ್ರಹ್ಮಾಂಡದೊಳಗೆ ಅನೇಕ ಮಂಡಲಗಳಿವೆ-ಅದರೊಳಗಿನ ಖಲವಿಚಾರಗಳ ಲೇಶವಿಲ್ಲದ ಯಾವದಾದರೊಂದು ಮಂಡಲದಲ್ಲಿ ನಮ್ಮನ್ನು ಒಯ್ದಿಡೆಂದು ದೈನ್ಯಭಾವದಿಂದ ಬೇಡಿಕೊಂಡಾರು ಅಲ್ಲದೆ ಸ್ವಾರ್ಥಿಭೂಪಾಲಕರ ಸಂಸರ್ಗವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಐಹಿಕಸುಖೋತ್ಕರ್ಷದ ಲಾಲಸೆಯನ್ನು ಬಿಟ್ಟುಕೊಟ್ಟು ಕೇವಲ ಸನ್ಯಾಸಿಗಳಂತೆ ವರ್ತಿಸಲಿಕ್ಕೆ ಸಿದ್ಧರಾದರಲ್ಲದೆ, ರಾಜನು ತಮಗೆ ನಿರುದ್ಧವಾಗಿ ನಡೆವನೆಂದು ರೊಜ್ಜಿಗೆದ್ದು ಪಶುವದಾಚರಣೆಯನ್ನು ಮಾಡತಕ್ಕವರು ನನ್ನ ಪ್ರಜರಲ್ಲ. ಇದು ನನ್ನ ಮನೋಮನ ಸಾಕ್ಷಿಯಾದ ಮಾತು ಆದಕಾರಣ ಕೈಕಯೀ, ಇಂಥ ಧಾರ್ಮಿಕ ಪ್ರಜಾಜನರಿಗೆ ದುಃಖ ಕೊಡುವ ಪಾತಕವನ್ನು ಮಾಡಬೇಡ ನಿನಗೆ ಕೈ ಜೋಡಿಸುವೆನು.

**ಮಾಲತಿ**- (ಆತುರದಿಂದ ಬಂದು) ದೇವಿಯವರೇ, ಮಂಥರೆಯನ್ನು ಸುಮಂತ ಪ್ರಧಾನರು ಪಟ್ಟಣಶೆಟ್ಟಿಯಾದ ನಾರಾಯಣದಾಸನ ಹೇಳಿಕೆಯಿಂದ ಕಾರಾಗೃಹದಲ್ಲಿರಿಸಿರುವರಂತೆ

**ದಶರಥ**- ಅದೇಕೆ ?

**ಮಾಲತಿ**-ಆ ಸಂಗತಿಯು ಹೊರಭಾಗದಲ್ಲಿ ಕಾದುಕೊಂಡಿದ್ದ ಅವಳ ತಮ್ಮನಿಗೆ ಗೊತ್ತು.

**ಕೈಕಯಾ**-ತೀವ್ರ ಅವನನ್ನು ಕರೆ. (ಬರುವನು) ಏನೋ ಶಂಭುಕಾ, ಏನು ಸಂಗತಿಯು ? ಬೇಗ ಹೇಳು.

**ಶಂಭುಕಾ**–ಮಹಾರಾಣಿಯವರೇ, ಬಡವರಾದ ನಾವು ಕೇವಲ ವಿಶ್ವಾಸದಿಂದ ಇಂದಿನತನಕ ತಮ್ಮ ಚರಣಗಳ ಸೇವೆಯನ್ನು ಮಾಡುತ್ತ ಬಂದೆವು-

**ಕೈಕಯಾ**-ಆದೆಲ್ಲಾ ರಗಳೆಯು ನನಗೆ ಬೇಕಿಲ್ಲ. ಮಂಥರೆಯ ವರ್ತಮಾನ ವೇನು ?

**ಶಂಭುಕ**-ಕನಸುಮನಸಿನಲ್ಲಿ ಕೂಡಾ ತಮ್ಮ ಕ್ಷೇಮಚಿಂತನೆಯನ್ನು ಮಾಡುವ ಅವಳು ಕೇವಲ ತಮ್ಮ ಹಿತಕ್ಕಾಗಿಯೇ ಭರತಮಹಾರಾಜರಿಗೆ ಪಟ್ಟವಾಗುವದರ ಸಲುವಾಗಿ ಅಭಿಪ್ರಾಯವನ್ನು ಕೊಡಿರೆಂದು ನಾಗರೀಕರಿಗೆ ಹೇಳುತ್ತಿರುವಾಗ್ಗೆ ಆ ಮದಾಂಧ ಪಟ್ಟಣಶೆಟ್ಟಿಯಾದ ನಾರಾಯಣದಾಸನು ಅವಳನ್ನು ಕಟ್ಟಿಹಾಕಿಸಿ ಮಂತ್ರಿಗಳನ್ನು ಕರೆಸಿ ಅವಳನ್ನವರ ಸ್ವಾಧೀನಪಡಿಸಿದನು. ಮಂತ್ರಿಗಳು ರಾಮಪಟ್ಟಾಭಿಷೇಕವಾಗುವ ತನಕ ಇವಳನ್ನು ಕತ್ತಲಕೋಣೆಯಲ್ಲಿ ಹಾಕಿಬಿಡಿರೆಂತಲೂ, ಮತ್ತೂ ತಮ್ಮ ಶಿಕ್ಕಾಮೊಹರಿನ ಆಜ್ಞಾಪತ್ರವಿಲ್ಲದೆ ಅವಳನ್ನು ಬಿಡಕೂಡದೆಂತಲೂ ಕಾರಾಗೃಹದ ಮೇಲಧಿಕಾರಿಗೆ ಅಪ್ಪಣೆಯನ್ನು ಕಳುಹಿಸಿದ್ದಾರೆ. ಪ್ರತ್ಯಕ್ಷ ತಮ್ಮ ಚರಣಸೇವಕರದೀಯವಸ್ಥೆ ಯಾಗಬೇಕೇ ?

**ದಶರಥ**- ತೀವ್ರ ಬಿಟ್ಟುಕೊಡುವ್ರದಕ್ಕಾಗಿ ಕಾರಾಗೃಹದ ಮೇಲಧಿಕಾರಿಗೆ ನನ್ನಾಜ್ಞೆಯನ್ನು ತಿಳುಹು.

**ಶಂಭುಕ**-ಮಹದಾಜ್ಞಾ (ಹೋಗುವನು)

**ಕೈಕಯಾ** ನಿಲ್ಲು ಏತಕ್ಕೆ ಹೋಗುವಿ ? ಇವರ ತಂತ್ರಗಳೆಲ್ಲವೂ ನನಗೆ ಗೊತ್ತಾಗಿವೆ. ಭರತನ ಕೈಯ್ಯಲ್ಲಿ ರಾಜ್ಯವು ಉಳಿಯಬೇಕೆಂದು ಹೇಳುವವರಿಗೆ ಕಾರಾಗೃಹವಾಸವಾಗುತ್ತಿರುವದೇ ? ಭರತನು ನಿಮ್ಮ ಮಗನಲ್ಲವೇ ?

**ದಶರಥ**-ಆದರೂ ಧರ್ಮಶಾಸ್ತ್ರ ದೃಷ್ಟಿಯಿಂದವನಿಗೆ ಪಟ್ಟವಿಲ್ಲ ಯಾಕಂದರೆ.

ಅವನು ಕನಿಷ್ಠನು, ರಾಮನು ಜೇಷ್ಠನು. ಅವನೇ ಈ ಸಾಕೇತ ಪಟ್ಟಕ್ಕೆ ಬಾಧ್ಯನಲ್ಲವೇ ?

**ಕೈಕೆಯಾ**–ನಿಮ್ಮ ಧರ್ಮಶಾಸ್ತ್ರವು ಸುಟ್ಟಿತು. ನನಗದರ ಅಭಿಪ್ರಾಯವೇ ಬೇಡಾ ನನ್ನ ಹಿತಕ್ಕಾಗಿಯೂ, ನನ್ನ ಭರತನ ಹಿತಕ್ಕಾಗಿಯೂ, ಮತ್ತು ನನ್ನ ದಾಸದಾಸಿಯರ ಹಿತಕ್ಕಾಗಿಯೂ ಭರತನಿಗೆ ಪಟ್ಟವಾಗಲೇಬೇಕು. ಮತ್ತು ರಾಮನು ವನವಾಸಿಯಾಗಲೇಬೇಕು.

**ದಶರಥ**-ಕೈಕಯೇ, ಭರತನ ಪಟ್ಟದ ಸಲುವಾಗಿ ಬೇಕಾದಟ್ಟಹಾಸವನ್ನು ಮಾಡು. ಆದರೆ ನನ್ನ ರಾಮಭದ್ರನನ್ನು ಅಡವೀಪಾಲು ಮಾಡುವ ದುರಾಲೋಚನೆಯನ್ನು ಮಾಡಬೇಡ.

**ಕೈಕೆಯಾ**-ಅದೇನಿಲ್ಲ, ಮಾಡಿದ ನಿರ್ಧಾರವನ್ನು ತಿರುಗಿಸಲು ನನ್ನಿಚ್ಛೆಯಿಲ್ಲ, ಭರತನಿಗೆ ರಾಜ್ಯಾ ಮತ್ತು ರಾಮನಿಗೆ ವನವಾಸ ಆಗಲಿಕ್ಕೇಬೇಕು

**ದಶರಥ**-ಅಯ್ಯೋ ! ಕೇಳೆನು ಕೇಳೆನು. ಈ ಪಿಶಾಚಿಯ ಭಯಾನಕವಾದ ಕರ್ಕಶ ನುಡಿಯನ್ನು ಕೇಳೆನು

**ಕೈಕೆಯಾ**-ಕೇಳುವದಾಗದಿದ್ದರೆ ಕಿವಿಯಲ್ಲ ಕಾದೆಣ್ಣೆಯನ್ನು ಸುರಿಸಿಕೊಂಡು ಬಧಿರಮಾಡಿಕೊಳ್ಳಿರಿ.

**ದಶರಥ**-ರಾಕ್ಷಸೀ, ನನ್ನನ್ನು ವಚನದಲ್ಲಿ ಬದ್ಧಮಾಡಿ ಗೋಳಾಡಿಸುವೆಯಾ?

**ಕೈಕೆಯಾ**-ವಚನಭ್ರಷ್ಟರಾಗಿ ಸುಖದಿಂದ ಕಾಲಹರಣಮಾಡಬಹುದಲ್ಲಾ

**ದಶರಥ**-ಆದರೂ ಚಿಂತೆಯಿಲ್ಲ. ನನ್ನ ರಾಮನಿಗೊಂದಿಗೂ ವನವಾಸವಾಗಗೊಡಲಿಕ್ಕಿಲ್ಲ

ಕೈಕೆಯಾ-ಸೂರ್ಯವಂಶದ ವಚನಭ್ರಷ್ಟ ಸೂರ್ಯನದೇನು ಪ್ರಕಾಶವಿದು! ಅಮವಾಸ್ಯೆಯ ಮಧ್ಯರಾತ್ರಿಯ ಪ್ರಕಾಶವನ್ನು ಕೂಡಾ ನಾಚಿಸುತ್ತಿರುವದು !!

ದಶರಥ-ಮನಬಂದಂತೆ ನಿಂದೆಯನ್ನು ಮಾಡಿದರೂ ನಿನಗೆ ಕೊಟ್ಟ ವಚನವನ್ನು ನಡಿಸುವುದಿಲ್ಲ

ಕೈಕೆಯಾ-ಏನು ? ಕೊಟ್ಟ ವಚನವನ್ನು ನಡಿಸುವದಿಲ್ಲವೇ ?

ದಶರಥ-ಇಲ್ಲ

ಕೈಕೆಯಾ- ಚಾಲ್-ಪ್ರಣಯಜರಿಭಂಡಲಾ

ಥೂ ವಚನಹೀನಾ ಖಲಾ ಅವನಿಪಾಲಧುರಾಳಾ || ಸೂರ್ಯವಂಶದವ
ನಿಲ್ಲ ನೀನು | ದುಷ್ಕಾರ್ಯಗೈಯುವಾ ಧ್ವಯಾರಜನಾ | ಪರ್ಯಾಲೋಚಿಸಲಿ
ಸಗೆ | ತೋರುದೇನೀ ಕಳಂಕಿತೆಖಲಾ ||೧||

ರಾಮ-ಅಮ್ಮಾ, ಏನು ಏನು ? ಯಾರಿಗೀತೆರಮಾತುಗಳನ್ನಾಡುವೆ ?

ಕೈಕೆಯಾ-ಇದೋ ಈ ವಚನಭ್ರಷ್ಟ ರಾಜನಿಗೆ.

ರಾಮ-ಏನಿದಸಂಬಂಧ ! ದಶರಥ ಮಹಾರಾಜನನ್ನು, ರವಿಕುಲತಿಲಕನನ್ನು ವಚನಭ್ರಷ್ಟನೆಂದು ಹೇಳುವ ನಿನ್ನ ಬುದ್ಧಿಭ್ರಂಶವಾಗಿರಬಹುದೆಂದು ಕಾಣುತ್ತೆ.

ಕೈಕೆಯಾ-ಬುದ್ಧಿಭ್ರಂಶವಾಗಲಿಕ್ಕೆ ನಾನೇನು ಸುರಾಪಾನವನ್ನು ಮಾಡಿಲ್ಲ. ತಿಳಿಯಿತೇ ?

ರಾಮ-ಹಾಗೆ ಮಾಡಿಲ್ಲದಿದ್ದರೆ ನೀನು ಹೀಗೆಂದೂ ಹೇಳುತ್ತಿದ್ದಿಲ್ಲ. ಸೂರ್ಯವಂಶ ಸಂಭೂತರು ವಚನಭ್ರಷ್ಟರಾಗುವರಂತೆ; ಏನೋ ಹೇಳುತ್ತಿರುವಳು,

## ಚಾಲ್-ದುರಂತಾಪರಾಧಾ

ದುರಾರಾಧ್ಯನೆಂದೂ ದೂರಿಕೊಳ್ಳುವೆಯಾ । ಧರಾದಿತ್ಯವಿಖ್ಯಾತಶಾರ್ದೂಲನನ್ನು ॥ ನಾಶವಾದರು ದೇಹ । ಭಾಷೆಗೆ ತಪ್ಪುವರೇ । ಈ ಸೂರ್ಯವಂಶ ವಸುಧೀಶರುಮಾತೇ ॥೧॥

**ಕೈಕಯಾ**-ಸೂರ್ಯವಂಶ ಸಂಭೂತರಾದ ನಿಮ್ಮ ವಾಕ್ಪೌರುಷವನ್ನಷ್ಟೇ ಕೇಳಬೇಕು !

**ರಾಮ**-ಅಮ್ಮಾ, ಹೀಗೇನು ಮೀರಿದಪ್ಪಿ ಮಾತುಗಳನ್ನಾಡುವೆ ? ಜನಕನು ನಿನಗೆ ಕೊಟ್ಟ ಯಾವ ವಚನವನ್ನು ಪಾಲಿಸಿಲ್ಲ ಹೇಳು

**ಕೈಕಯಾ**-ಕೇಳಿ ನೀನು ಮಾಡುವ ಪುರುಷಾರ್ಥವಾದರೂ ಕಣ್ಣಿಗೆ ಕಂಡದ್ದೇ ಇದೆ

**ರಾಮ**-ನಮ್ಮಿಂದ ಪುರುಷಾರ್ಥವಾಗದಿದ್ದರೆ ಮಾತ್ರ ನೀನು ಹೀಗೆ ನಿಂದಿಸಬಹುದು. ತತ್ಪೂರ್ವದಲ್ಲಿಯೇ ನಿಂದಿಸುತ್ತಿರುವೆಯಲ್ಲಾ ?

**ಕೈಕಯಾ**-ಹೀಗೋ ? ಹಾಗಾದರೆ ಕೇಳು. ರಾಮನೇ, ದೇವದಾನವರ ಸಂಗ್ರಾಮಕಾಲಕ್ಕೆ ಈ ನಿನ್ನ ತಂದೆಯು ದೇವತೆಗಳ ವತಿಯಿಂದ ದಾನವರೊಡನೆ ಯುದ್ಧಮಾಡುತ್ತಿರುವಾಗ್ಗೆ ನಾನೀತನ ಸಂಗಡವೇ ರಥದಲ್ಲಿದ್ದೆನು ಘನಘೋರಯುದ್ಧವು ನಡೆದಿದೆ, ರಾಕ್ಷಸರು ವರ್ಷಾಕಾಲದೊಳಗಿನ ಮಹಾಸಾಗರನ ಪ್ರಕ್ಷುಬ್ಧವಾದ ತೆರಗಳಂತೆ ನಿಮ್ಮ ತಂದೆಯಮೇಲೆ ಸಾಗಿಬರುತ್ತಲಿದ್ದಾರೆ, ನಿಮ್ಮ ತಂದೆಯು ಒಂದೇ ಸವನೇ ಅವರನ್ನು ಸಂಹರಿಸುತ್ತಲಿದ್ದಾನೆ ಅಷ್ಟರಲ್ಲಿ ಒಬ್ಬ ದೈತ್ಯನು ಕಣ್ಣು ತಪ್ಪಿಸಿ ರಥದ ಹಿಂಭಾಗದಲ್ಲಿ ಬಂದು ಒಂದು ರಥಚಕ್ರದ ಕೀಲು ತಪ್ಪಿಸಿದನು. ಕೂಡಲೇ ಚಕ್ರವು ತಪ್ಪಿಹೋಗುವ ಸಂಧಿಯಲ್ಲಿತ್ತು-

**ರಾಮ**-ಅಹಹಾ ಏನು ಪ್ರಮಾದವು ! ಮುಂದೆ ?

**ಕೈಕಯಾ-** ಚಕ್ರವು ತಪ್ಪಿಹೋಗಿ ರಥವು ಬಿದ್ದುಬಿಟ್ಟದ್ದರೆ ಅಧರ್ಮ ಯುದ್ಧವನ್ನಾಡುವ ರಕ್ಕಸರು ನಿನ್ನ ತಂದೆಯನ್ನು ರಥವಿಹೀನ ನೆಂದು ಬಿಡುತ್ತಿದ್ದಿಲ್ಲ. ತಕ್ಷಣವೇ ಸಂಧಿಯನ್ನು ಸಾಧಿಸಿ ಘಾತ ಮಾಡುತ್ತಿದ್ದರು.

**ರಾಮು-** ಇದು ಸತ್ಯವಾದ ಮಾತು. ಯಾಕಂದರೆ-ವಿಶ್ವಾಮಿತ್ರ ಮಹರ್ಷಿ ಗಳ ಆಶ್ರಮದಲ್ಲಿ ಅವರ ಮೋಸಗಾರಿಕೆಯನುಭವವು ನನಗೆ ಚನ್ನಾಗಿ ಬಂದಿದೆ ಇರಲಿ, ಆಮೇಲೆ?

**ಕೈಕಯಾ-**ಅಂತಹ ಸಂಧಿಯಲ್ಲಿ ನಾನು ರಥಚಕ್ರವನ್ನು ಕೆಳಗೆ ಬೀಳಗೊಡ ಬಾರದೆಂದು ನಿರ್ಧರಿತಳಾಗಿ ಕೀಲುಛಿದ್ರವಲ್ಲ ನನ್ನ ಕೈಬೆರಳನಿಟ್ಟೆನು.

**ರಾಮು**–ಸೈ ಸೈ ! ವೀರಪತ್ನೀ !!

**ಕೈಕಯಾ**–ಮತ್ತು ರಾಜನು ನಿಶ್ಚಿಂತೆಯಿಂದ ಯುದ್ಧವನ್ನಾಡುವದಕ್ಕೆ ಪ್ರೋತ್ಸಾಹಿಸಿದೆನು. ನಾನು ಮಾಡಿದ ಸಾಹಸವನ್ನು ನೋಡುತ್ತಲೇ ರಾಜನ ಕಣ್ಣುಗಳಿಂದಾನಂದಬಾಷ್ಪಗಳು ಸುರಿದವು

**ರಾಮು**–ಸುರಿಯದೇನು ಮಾಡ್ಯಾವು ? ಸಾಮಾನ್ಯಸಹಾಯವೇ ?

**ಕೈಕಯಾ**–ಕೂಡಲೇ ರಾಜನ ಸಂಗರಾವೇಶವು ಶತಗುಣಿತವಾಯಿತು. ಕಾಲಭೈರವನಂತೆ ದೈತ್ಯಸಂಹಾರ ಸತ್ರವನ್ನಖಂಡವಾಗಿ ನಡೆಸಿದನು.

**ರಾಮು**–ಅಬ್ಬಾ ! ಒಳ್ಳೇ ಸ್ಫೂರ್ತಿದಾಯಕ ವಿಷಯ.

**ಕೈಕಯಾ**–ಅದನ್ನು ನೋಡಿ ದೈತ್ಯರು ಘಾಬರಿಯಾದರು ಪಲಾಯನ ಮಾಡುವದಕ್ಕವಸಾನ ಸಾಲದೆ ನಿಂತನಿಂತಲ್ಲಿಯೇ ನಿನ್ನ ತಂದೆಯಾದೀ ಮಹಾರಾಜನಿಗೆ ಭೂದಂಡ ನಮಸ್ಕಾರವನ್ನು ಹಾಕಿ ದೈತ್ಯಸಂಹಾರ

ವನ್ನು ನಿಲ್ಲಿಸುವುದಕ್ಕಾಗಿ ವೊರೆಯಿಟ್ಟರು. ವಿಜಯಶಾಲಿಯಾದ ಮಹಾ ರಾಜನು ಕೂಡಲೆ ಯುದ್ಧವನ್ನು ನಿಲ್ಲಿಸಿ ಆತಃಪರ ಅಸುರ ಲೋಕಕ್ಕೆ ತಾಪವನ್ನು ಕೊಡಲಾಗದೆಂದು ದೈತ್ಯರಿಗಾಜ್ಞಾಪಿಸಿ ಸನ್ನ ಕಡೆಗೆ ತಿರುಗಿ ಕೃತಜ್ಞತೆಯಿಂದ ಕೈಕಯೀ, ನಿನ್ನ ಸಹಾಯದಿಂದಲೇ ಈ ದಿನ ಯುದ್ಧದಲ್ಲಿ ನಾನು ವಿಜಯಶಾಲಿಯಾದೆನು ಅದರ ಪ್ರತಿಫಲ ವಂದು ನಿನಗೆ ಎರಡು ವರಗಳನ್ನು ಕೊಟ್ಟಿರುವೆನು- ಮನಬಯಸಿ ದ್ದನ್ನು ಕೇಳಿಕೋ—ಎಂದು ಹೇಳಿದನು.

**ರಾಮ**—ಗುಣಗ್ರಾಹಿಯಾದ ಜನಕನು ತನ್ನ ಶೀಲಕ್ಕನುಸರಿಸಿ ಕರ್ತವ್ಯ ಮಾಡಿದನು.

**ಕೈಕಯಾ**—ಆಗ್ಗೆ ನಾನು ಸಮಯಾನುಸಾರ ಇವೆರಡು ವರಫಲಗಳನ್ನು ಕೊಳ್ಳುವನೆಂದು ಹೇಳಿದ್ದೆನು.

**ರಾಮ**-ಆದರೆ ಈಗೇನಾಯಿತು ?

**ಕೈಕಯಾ**—ಈಗ್ಗೆ ಆ ವರಗಳನ್ನು ಪೂರ್ಣವಾಡುವದಕ್ಕಾಗಿ ಕೇಳಿಕೊಂಡರೆ ಹೀಗೆ ಡೋಕಾರಿತನವನ್ನು ನಟಿಸಿ ನಡೆಸುವದಾಗುವದಿಲ್ಲವೆಂದ ಹೇಳು ತ್ತಿರುವ ರಾಜನನ್ನು ಸೂರ್ಯವಂಶೀಯನೆಂದು ನಾನು ಹೇಗೆ ನಂಬಲಿ

**ರಾಮ**-ಮಾತೇ, ನಿನ್ನ ಮಾತುಗಳನ್ನು ನಾನೊಪ್ಪೆನು. ತಾತನು ವಚನ ಭ್ರಷ್ಟನಾಗುವನೇ ?

**ಕೈಕಯಾ**-ಕೇಳು ಎದುರಿನಲ್ಲಿಯೇ ಇರುವನು

**ರಾಮ**—ಏನು ತಾತಾ, ಮಾತೆಯು ಹೀಗೇನು ಹೇಳುತ್ತಿರುವಳು ?

**ದಶರಥ**— ಚಾಲ್-ತೋರೆನಗರಿಯಾಚಾಯ್

ತಾಪವಬಡಿಸುವಳೂರಾಮಾ । ಈ ಪಾಪಿಣಿಯು ವಚನವೆನ್ನಸು । ಈಸರಿ

ಬಂಧಿಸಿ ಕಸಿಕರವಿಲ್ಲವೆ॥ ತೀರುವಳೀರಾಕ್ಷಸಿಯುನಗೇ। ವೀರಿದವರವಾ
ಪ್ರಿಯಕುಮಾರನೇ। ಪೂರೈಸಲು ನಾನಿವಳಕೋರಿಕೇ॥ ಧಾರುಣಿಯೊಳು
ಜೀವಿಸುವದಸಾಧ್ಯಾ॥೧॥

**ರಾಮ**-ಇದೇನು ತಾತಾ ಹೀಗೆ ಹೇಳುವೆ ? ಈ ಭೂಮಂಡಲದಲ್ಲಿ ರವಿಕುಲ ರಾಜರಿಗೆ ಸಾಧ್ಯವಿಲ್ಲದ್ದಾವಸಂಗತಿಯಿದೆ ? ಹೇಳಿ ನೋಡುವಾ ?

### ಚಾಲ್-ಟಾಳಾನಿಜಪರಹಾಟಾಳ

ವಿನಾಶಿಸುವಿಯೆ ಭೋಪಾತೆ। ತನಯುನಿಗದನುಸುರೀ ದಯುವಂತೆ।
ನಾನು ಪೂರ್ಣಗೈಯುವನಿವಳ್ಪರಿತೆ॥ ವಾಸುಕಿಶಿರದಾರತ್ನವು ಬೇಕೇ। ವಾಸ
ವನ್ನೈರಾವತವದು ಬೇಕೇ॥೧।

**ದಶರಥ**-ನೀನು ಹೇಳುವ ಪದಾರ್ಥಗಳಲ್ಲಾವವನ್ನು ಕೇಳಿದರೂ ತಂದು ಕೊಡುವ ಶಕ್ತಿಯು ನನ್ನಲ್ಲುಂಟು. ಆದರ ರಾಮಾ, ಈ ರಾಕ್ಷಸಿಯು ನನ್ನ ಶಕ್ತಿಗೆ ಮೀರಿವಂಥಾದ್ದನ್ನು ಕೊಡುವುದಕ್ಕಾಗಿ ಅಗ್ರಹವನ್ನು ಪಿಡಿದಿದ್ದಾಳೆ

**ರಾಮ**-ಹಾಗಿದ್ದರೇ ತಮ್ಮಾಶೀರ್ವಾದ ಬಲದಿಂದದನ್ನು ನಾನು ಪೂರೈಸಿ ಕೊಡುವೆನು. ಹೇಳಿಹೇಳಿ ಏನದು ?

**ದಶರಥ**-ಬೇಡ ರಾಮಾ, ಆ ಶಬ್ದಗಳನ್ನು ನಾನು ರಸನೆಯಿಂದುಚ್ಚರಿಸಲಾರೆ ಮರಣಕ್ಕಿಂತಲೂ ಅಸಹ್ಯಕರವಾದ ಯಾತನೆಗಳನ್ನು ಕೊಡುವ ಸಂಗತಿಯನ್ನೇನು ಹೇಳಲಿ ಕೈಕಯೀ, ಆ ದುರಾಗ್ರಹವನ್ನು ಬಿಟ್ಟುಕೊಡು ನಿನಗೆ ಕರಜೋಡಿಸುತ್ತೇನೆ

**ಕೈಕಯಾ**-ಥೂ ! ಹೇಡೀ.

**ರಾಮ**-ಅಕ್ಕಮ್ಮ ಬಾಯಿ ಬಿಗಿಹಿಡಿ ತಾತನ ನಿರ್ಭರ್ತ್ಸನೆಯನ್ನು ಮಾಡು

ವೆಯಾ ? ಹೇಳು, ನನಗೆ ಹೇಳು; ನಿನ್ನದೇನಪೇಕ್ಷೆಯಿದೆ ? ವೃಥಾ ಪಿತನನ್ನು ನಿಂದಿಸಬೇಡ.

**ಕೈಕಯಾ**-ಹೇಳಿದರದನ್ನು ಪೂರ್ಣಮಾಡುವೆಯಾ ?

**ರಾಮ**–ಸಂದೇಹವಿಲ್ಲದೇ ಪೂರ್ಣಮಾಡುವೆನು ಹೇಳು ?

**ಕೈಕಯಾ**-

ಚಾಲ್-ವಿರಾಟಜ್ಞಾನಿ

ಕುಮಾರಕೇಳೋ । ಕಾಮಿತವಾಪೂರೈಸೋ ॥ ಮೊರೆಯುಬೇಕು ಮಮಭರತಗೆರಾಜ್ಯ ॥ ಕುಮಾರಕೇಳೋ ॥

**ದಶರಥ**-(ಕೈಕಯಿಯ ಬಾಯಿಮುಚ್ಚಿ) ಬೇಡಾ ! ಮುಂದಿನ ಸಂಗತಿಯನ್ನು ಹೇಳಬೇಡಾ ! ಕೈಕಯೀ,

**ರಾಮ**-ತಾತಾ, ಹೀಗೇನುಮಾಡುವಿರಿ. ವಿಕಾರವಶರಾಗಿ ರವಿಕುಲಕ್ಕೆ ಕಲಂಕ ಹಚ್ಚುವ ಕೃತಿಯನ್ನು ಮಾಡುವದು ಬೇಡಾ ಹೂಂ ! ಮಾತೇ ಒಂದು ವರದಿಂದ ಭರತನಿಗೆ ರಾಜ್ಯವಾಗಬೇಕು. ಮತ್ತು ಮತ್ತೊಂದು ವರದಿಂದೇನಾಗಬೇಕು ಹೇಳು.

**ಕೈಕಯಾ**-

ಚಾಲ್-ಸದರ್-ಅಂತರಾ

ಕಳೆಯಬೇಕು ಹದಿನಾಲ್ಕುವರುಷಗಳ । ಕಾಲವನು ಕಾಂತಾರದಿನೀನು ॥೧॥ ಕುಮಾರಕೇಳೋ ॥

**ದಶರಥ**-ಅಯ್ಯೋ, ಮಸ್ತಕದ ಮೇಲೆ ವಿದ್ಯುತ್ಪಾತವಾಯಿತು (ಮೂರ್ಛಿತನಾಗುವನು.)

**ರಾಮ**–ಪರವಿಲ್ಲ ಸಹನಮಾಡಿಕೊಳ್ಳಿರಿ !



ದಶರಥ- ಬಿಡಲಾರೆನು ನಾತನಯಾ।

### ಚಾಲ್-ನಾಹೆತೂತೆಹೃದಯಿ

ಪೋಷಿಸಿದಾ ರಾಜನನಿಯಗಾಲಿಸೆ ನಿನಿವತೀಗಾ | ತಾತನನ ಪತನಕೆ ಭರ
ತನನಪರತನೇ | ಧರಣಿಯು ಸಲಹಲೇ | ಧರಣಿಪತಿಕ ಪರಸಸ | ತಾಂ
ಪರಸೆಬಿಸ ॥೧॥

**ದಶರಥ**–ಏನು? ನನ್ನ ಪಂಚಪ್ರಾಣನಾದ ರಾಮನು ವನವಾಸಿಯಾಗುವನೇ?

**ರಾಮ**–ಪಿತನೇ, ದುಃಖಿತಾಂತಃಕರಣಿಯಾಗಬೇಡ ಸೂರ್ಯವಂಶದವರು ತಮ್ಮ ಸತ್ವವನ್ನು ಕಾಯ್ದುಕೊಳ್ಳುವವರಲ್ಲಿ ಹೆಸರಾದವರು ಆ ಬಿರುದನ್ನು ಕಳೆದುಕೊಳ್ಳಲಿಕ್ಕೆ ಮಾರ್ಗವಿಲ್ಲ.

**ಕೈಕಯಾ**-ಸತ್ಯ ಮಾತಾಡಿದೆ!

**ದಶರಥ**–ಅಯ್ಯೋ ರಕ್ಕಸಿಯೇ, ನಿನ್ನಂತಃಕರಣವೇನಾಯಿತೇ?

**ರಾಮ**–ಆಗಲಿ, ಮಾತೇ, ನಾನು ನನ್ನ ವನವಾಸದ ಪ್ರಸ್ಥಾನವನ್ನು ಸಿದ್ಧಪಡಿಸಿಕೊಂಡು ಬರುತ್ತೇನೆ.

**ದಶರಥ**–ಬೇಡ ಬೇಡ. ರಾಮಾ, ಹಾಗೆ ಮಾಡಬೇಡ.

**ರಾಮ**-ಬಿಡು ಪಿತನೇ, ಇದು ಮೋಹಪರವಶರಾಗುವ ಸಮಯವಲ್ಲ. (ಹೋಗುವನು)

**ದಶರಥ**-

### ಚಾಲ್-ನಚತಾಯದಯಾ

ಬಿಡಲಾರೆನು ನಾತನಯಾ | ಹೇ ವಿನಯಾ | ಬೇಡ ಪೋಗದಿರು ಕಾನನಕೇ ॥
ಜರಾವಸ್ಥೆಯೊಳ್ | ನೀನೇ ಯುನಗಾ | ಧಾರನಲ್ಲವೇ | ಘೋರಘೋರಾ ಸಾ |
ಸರೋಜನಯನಾ | ನಿರುಪಮ ಲಕಾಯಾ ॥೧॥

 **ದ್ವಿತಿಯಾಂಕ ಸಮಾಪ್ತ.** 

# ತೃತೀಯಾಂಕ

**ಮಾಲತಿ**-ಶಂಭುಕಾ, ಈ ವಿಚಾರವಲ್ಲಿ ಕಾಲಹರಣ ಮಾಡುವ ಸಮಯವಲ್ಲ ಯಾವದಾದರೊಂದು ಹಂಚಿಕೆಯಿಂದ ಮಂಥರೆಯನ್ನು ಕಾರಾಗೃಹ ದಿಂದ ಮುಕ್ತಮಾಡಲೇಬೇಕು.

**ಶಂಭುಕ**-ಅದೇನೋ ನಿಜ.

**ಮಾಲತಿ**-ಕೈಕಯಾ ಮಹಾರಾಣಿಯವರಂತೂ ಮಹಾರಾಜರನ್ನು ಇಕ್ಕಟ್ಟಿನಲ್ಲಿ ತಂದುಬಿಟ್ಟಿದ್ದಾರೆ ಯುವರಾಜ ರಾಮಚಂದ್ರ ಮಹಾರಾಜರು ಪಿತೃವಚನವನ್ನು ಸತ್ಯಮಾಡುವ ಹ್ಯಾವದಿಂದ ವನವಾಸದ ಸಿದ್ಧತೆಯನ್ನು ಮಾಡಿಕೊಳ್ಳಲುದ್ಯುಕ್ತರಾಗಿದ್ದಾರೆ. ಇಷ್ಟಾದರೂ ಆ ವಶಿಷ್ಠ ಸುಮಂತಾದಿಗಳು ಮಧ್ಯದಲ್ಲೇನೇನು ವಿಘ್ನವನ್ನು ತರುವರೋ ಕಾಣೆ! ಅಂತಹ ಸಮಯದಲ್ಲಿ ಕೈಕಯಾ ಮಹಾರಾಣಿಯವರ ಹತ್ತಿರಕ್ಕೆ ಮಂಥರೆಯು ಇದ್ದರೇನೇ ನಮ್ಮ ಇಚ್ಛೆಯು ನೆರವೇರುವದು

**ಶಂಭುಕ**-ಮಾಲತಿ, ನಮ್ಮ ಇಚ್ಛೆಯ ವಿರುದ್ಧವಾಗಿ ಕದಾಚಿತ ರಾಮಭದ್ರ ಮಹಾರಾಜರು ಪಟ್ಟವನ್ನೇರಿದರೇನು ಹೇಳಲಿ! ಅವರ ಸ್ವಾತಂತ್ರ್ಯದಲ್ಲಿ ರಾಜ್ಯವನ್ನು ಕೊಡುವದಕ್ಕೆ ವಿಘ್ನವನ್ನು ಕಲ್ಪಿಸಿದ ಕೈಕಯಾ ಮಹಾರಾಣಿಯವರ ಪಕ್ಷದ ನಮ್ಮೆಲ್ಲರನ್ನು ಸುಮಂತ ಪ್ರಧಾನರು ಸುಣ್ಣದಲ್ಲಿ ಸುಡಿಸಿಬಿಟ್ಟಾರು.

**ಮಾಲತಿ**-ಅಂತೇ ಹೇಳುವದೇನು ? ಏನಾದರೊಂದು ಸಾಹಸದಿಂದ ಮಂಥರೆಯನ್ನು ಬಂಧನದಿಂದ ಮುಕ್ತಮಾಡಲೇಬೇಕು.

**ಶಂಭುಕ**-ಅದೇನೋ ನಿಜ ಅದಕ್ಕಾಗಿ ಕೈಕಯಾ ರಾಣಿಯವರಿಂದ ಹಿರೇ

ಮಹಾರಾಜರಿಗೆ ಹೇಳಿಸಿ, ಮಂಥರೆಯನ್ನು ತಕ್ಷಣವೇ ಬಿಟ್ಟು ಕೊಡು ವದಕ್ಕಾಗಿ ಕಾರಾಗೃಹದ ಮೇಲಧಿಕಾರಿಗೆ ಒಂದಾಜ್ಞಾಪತ್ರವನ್ನು ಮಹಾರಾಜರಿಂದ ತೆಗೆದುಕೊಂಡರಾಯಿತು

**ಮಾಲತಿ**-ಅದು ಸಾಧ್ಯವಿಲ್ಲದ ಸಂಗತಿಯಾಗಿರುವದಂತೇ ! ಆಲೋಚನೆ ಯಲ್ಲಿ ಬಿದ್ದಿದ್ದೇನೆ

**ಶಂಭುಕ**-ಅದೇಕೆ ಸಾಧ್ಯವಿಲ್ಲ ?

**ಮಾಲತಿ**-ರಾಮಭದ್ರಮಹಾರಾಜರು ವನವಾಸದ ಸಿದ್ಧತೆಯನ್ನು ಮಾಡಿ ಕೊಳ್ಳಲಿಕ್ಕೆ ಹೋದತಕ್ಷಣವೇ ಹಿರೇಮಹಾರಾಜರಿಗೆ ವಿದ್ಯುದಾಘಾತ ವಾದಂತಾಗಿ ಮೂರ್ಛಿತರಾಗಿ ಬಿದ್ದವರು ಇನ್ನೂ ಎಚ್ಚರಿಯದೇ ಮಲಗಿಬಿಟ್ಟಿದ್ದಾರ. ಉಪಚಾರವು ನಡೆದಿದೆ ಆದರೂ ಇಂತಹ ಪರಿ ಸ್ಥಿತಿಯಲ್ಲವರನ್ನು ಕೇಳುವದೆಂತೂ ಮತ್ತು ಅವರಾಜ್ಞಾಪತ್ರವನ್ನು ಬರದುಕೊಡುವದೆಂತು

**ಶಂಭುಕ**-ಹೀಗಿದ್ದರೆ ಮಾತ್ರ ಆಜ್ಞಾಪತ್ರವನ್ನು ಪಡೆಯುವದಸಾಧ್ಯವೇ ಸರಿ. ಇರಲಿ, ಮುಂದೇನಾಲೋಚನೆ?

**ಮಾಲತಿ**- ಅದನ್ನೇ ಯೋಚಿಸಬೇಕಾಗಿದೆ. ಮಹಾರಾಜರು ಎಚ್ಚರಿಯುವ ದರೊಳಗಾಗಿ ಮಂಥರಯನ್ನು ಮುಕ್ತಮಾಡಿಕೊಳ್ಳಲೇಬೇಕು, ಸು ಮಂತವಶಿಷ್ಠಾದಿತರರಿಗಿವಳೇ ಮದ್ದು ಅವಳಾರೋ? ಕೈಯಲ್ಲೇನೋ ಹಿಡಿದುಕೊಂಡು ಬರುತ್ತಿರುವಳು.

**ಶಂಭುಕ**-ನನಗಾದರೂ ವಳಿತಾಗಿ ಗುರುತು ಸಿಗಲೊಲ್ಲದು ಯಾರೇನೀನು?

**ದಾಸಿ** ಅಯ್ಯಾ, ನಾನು ಸ್ತ್ರೀ ಕಾರಾಗೃಹವಾಸಿಗಳಿಗನ್ನವನ್ನು ಕೊಟ್ಟು ಬರತಕ್ಕ ಸೇವಕಿಯು. ನಿನ್ನೆ ಯಾವಳೋ ಒಬ್ಬ ಅರಮನೆಯ

ದಾಸಿಯು ಕಾರಾಗೃಹವಲ್ಲಿಡಲ್ಪಟ್ಟಿದ್ದಾಳೆ ಅವಳಿಗನ್ನವನ್ನು ಕೊಟ್ಟು ಬರುವದಕ್ಕಾಗಿ ನಡೆದಿರುವೆನು.

**ಮಾಲತಿ-** ಓಹೋ! ಇವಳು ಮಂಥರೆಗೇನೇ, ಅನ್ನವನ್ನು ಪ್ರೈಯುತ್ತಲಿದ್ದಾಳೆ ಶಂಭುಕಾ ಈ ಸಮಯದಲ್ಲೊಂದು ಸಾಹಸವನ್ನು ಮಾಡಬೇಕು. ಅದಕ್ಕೆ ನೀನೇ ಮುಂದಾಗಬೇಕು (ಹೋಗುವ ಸೇವಕಿಗೆ) ಯೇ, ಸ್ವಲ್ಪ ನೀನು ತೆರೆಯಲ್ಲಿ ನಿಲ್ಲೇ ಹೋಗುವೆಯಂತೆ

**ದಾಸಿ-** ಅಮ್ಮಾ, ತಡವಾದರೆ ಮೇಲಧಿಕಾರಿಗಳು ಕೋಪಗೊಂಡಾರು?

**ಮಾಲತಿ-** ವಿಶೇಷ ನಿಲ್ಲಿಸಿಕೊಳ್ಳುವುದಿಲ್ಲ ಒಂದರಘಳಿಗೆಮಾತ್ರ!

**ದಾಸಿ-** ಅಷ್ಟಕ್ಕಾದರೆ ಪರವಿಲ್ಲ ಹೆಚ್ಚಿಗೆಮಾತ್ರ ನಿಲ್ಲಲಿಕ್ಕಿಲ್ಲ.

**ಮಾಲತಿ-** ಆಗಲಿ, ಹಾಗೇಮಾಡು ಶಂಭುಕಾ, ಸಾಹಸವನ್ನು ಮಾಡದೇ ಮಹತ್ಕಾರ್ಯಗಳು ಸಾಧಿಸಲಾರವು ಮಂಥರೆಯನ್ನು ಕಾರಾಗೃಹದಿಂದ ಮುಕ್ತಮಾಡುವದೊಂದಚ್ಚುಕಟ್ಟಾದ ಯೋಚನೆಯು ತೋಚಿದೆ. ಅದೇನಂದರೆ-ಸ್ವಲ್ಪ ಕಿವಿಯನ್ನು ಮುಂದೆಮಾಡು ಹೇಳುವೆನು. (ಕಿವಿಯಲ್ಲಿ ಹೇಳುವಳು)

**ಶಂಭುಕ-** (ಆನಂದದಿಂದ) ಅಚ್ಚುಕಟ್ಟಾದ ಯೋಚನೆಯು. ಈ ದಾಸಿಯೊಂದೊಪ್ಪಿಕೊಳ್ಳಬೇಕಲ್ಲಾ.

**ಮಾಲತಿ-** ಅದೇನಷ್ಟು ಕಠಿಣವಾದ ಕೆಲಸವಲ್ಲಾ! ಸ್ವಲ್ಪ ತಾಳು. ಏನೇ ಇತ್ತಬಾ

**ದಾಸಿ-** ಏನು ತಾಯಿ, (ಬರುವಳು)

**ಮಾಲತಿ-** ಇದೋ, ಈ ಉಂಗರವನ್ನು ತೆಗೆದುಕೋ!

**ದಾಸಿ-** ಅಯ್ಯೋ! ಬಡವಿಯಾದ ನನಗದೇತಕ್ಕೆ ಬೇಕಮ್ಮಾ, ಛೀ! ಛೀ! ಬೇಡಬೇಡಾ

**ಮಾಲತಿ-** ನಿನ್ನ ಬಡತನವು ಹಿಂಗುವಂಥಾದ್ದೊಂದು ಯುಕ್ತಿಯನ್ನು ಮಾಡಿರುವೆನು

**ದಾಸಿ-** ಹಾಗಾದರೆ ತಮ್ಮ ಉಪಕಾರವನ್ನು ಸಾಯುತನಕ ಮರೆಯ ಲಾರೆನು

**ಮಾಲತಿ-** ಇದೋ! ಈ ಕಂಠಿಯನ್ನೊಂದು ತೆಗೆದುಕೋ!

**ದಾಸಿ-** ಅಯ್ಯಯ್ಯೋ! ನಾನೇನು ನಿಮ್ಮ ಸೇವೆಯನ್ನು ಮಾಡಿರುವೆನೆಂದು ನನಗದನ್ನು ಕೊಡುವಿರಿ.

**ಮಾಲತಿ-** ನಮ್ಮ ಸೇವೆಯನ್ನು ನೀನು ಮಾಡಿಲ್ಲದಿದ್ದರೂ, ಇನ್ನು ಮುಂದೆ ಮಾಡುವಿಯಂತೆ?

**ದಾಸಿ-** ಮಾಡಿದಾಗ್ಗೆ ನೀವು ನನಗದನ್ನು ಕೊಡುವಿರಂತೆ?

**ಮಾಲತಿ-** ನೀನೇನು ಮಾಡಬೇಕೆನ್ನುವದನ್ನು ಈಗಲೇ ಹೇಳುವೆನು? ಮೊದಲಿದನ್ನು ಕೊರಳಲ್ಲಿ ಹಾಕಿಕೋ?

**ದಾಸಿ.** (ಕೊರಳಲ್ಲಿ ಹಾರವನ್ನು ಹಾಕಿಕೊಂಡು) ಏನದು ಹೇಳಿ?

**ಮಾಲತಿ.** ವಿಶೇಷವೇನೂ ಇಲ್ಲ. ಈ ನಿನ್ನ ವೇಷವನ್ನು ಈ ದಿನದ ಮಟ್ಟಿಗೆ ನಮಗೆ ಕೊಡು

**ದಾಸಿ-** ಅದರಿಂದೇನು ಪ್ರಯೋಜನ?

**ಮಾಲತಿ-** ಕಾರಾಗೃಹದಲ್ಲಿದ್ದವಳು ನನ್ನ ಅಕ್ಕನು ಈ ನಿನ್ನ ವೇಷದಿಂದ

ಅನಿರ್ಬಂಧವಾಗಿ ಕಾರಾಗೃಹವನ್ನು ಸೇರಿ, ಅವಳನ್ನು ಕಂಡು ಅವಳೊಡನೆ ನಾಲ್ಕು ಮಾತುಗಳನ್ನಾಡಿ ಬರುತ್ತೇನೆ

**ದಾಸಿ** ಪ್ರಸಂಗೋಪಾತ್ ಕಾವಲುಗಾರರಿಗೆ ಈ ನಿಮ್ಮ ಕಪಟವು ಗೊತ್ತಾದರ ನಿಮ್ಮ ಪರಿಣಾಮವೇನಾದೀತು. ಮತ್ತೂ ನನ್ನ ಪರಿಣಾಮವೇನಾದೀತು ?

**ಮಾಲತಿ-** ನಮ್ಮದೇನಾದರೂ ಆಗಲಿ, ನಿನಗುಳಿದುಕೊಳ್ಳಲಿಕ್ಕೆ ಬೇಕಾದಷ್ಟು ಮಾರ್ಗಗಳಿವೆ ?

**ದಾಸಿ-** ಅವನ್ನಷ್ಟು ತಿಳುಹಿಸಿದರ ನಿಮ್ಮ ಹೇಳಿಕೆಯಂತೆ ಈಗಲೇ ನನ್ನ ವೇಷವನ್ನು ಕೊಟ್ಟು ಹಾಕುವೆನು.

**ಮಾಲತಿ-**ಎಲೇ, ಒಂದು ಸಮಯ ನಮ್ಮ ಕಪಟವು ಬೈಲಿಗೆ ಬಿದ್ದರೆ ಕಾರಾಗೃಹದ ಮೇಲಧಿಕಾರಿಯು ನಿನ್ನನ್ನು ಕರತರಿಸಿ ಕೇಳುತ್ತಾನೆ ಆ ಸಮಯವಲ್ಲ ನೀನು ಎರಡೂ ಕಿವಿಗಳನ್ನು ಮುಚ್ಚಿಕೊಂಡು ಮಹಾಸ್ವಾಮಿ ಅವರು ಯಾರೋ, ಏನೋ, ನಾನು ಒಂದೂ ಸಂಗತಿಗಳನ್ನರಿಯೆನೆಂದು ಖಂಡಿತವಾಗಿ ಹೇಳಿಬಿಡು ನಾಲ್ಕು ಒದೆಕೆಗಳನ್ನು ಕೊಟ್ಟರೆ ನಮ್ಮ ಸಲುವಾಗಿ ಅಷ್ಟು ಸಹಿಸು.

**ಶಂಭುಕ-**ನಮ್ಮ ಸಲುವಾಗಿ ಬೇಡವೇಬೇಡಾ. ನಿನಗೆ ಸಿಕ್ಕ ಪಾರಿತೋಷಕದ ಸಲುವಾಗಿಯಾದರೂ ಸಹಿಸು ಎಲೇ ಪರಿಚಾರಿಕೇ, ಸಾಹಸವನ್ನು ಮಾಡದೇ ಸಂಪತ್ತಿಯು ಹೇಗೆ ಸಿಕ್ಕೀತು ಆಗಲಿ ಮಾಲತಿ, ಇನ್ನೊಂದು ಮುತ್ತಿನ ಸರವನ್ನು ಕೊಟ್ಟುಬಿಡು; ಪಾಪ ! ಬಡವಿಯು ಎಲ್ಲಿಯಾದರೂ ದೇಶಾಂತರಕ್ಕೆ ಹೋಗಿ, ಮಕ್ಕಳು ಮರಿಗಳೊಂದಿಗೆ ಸಾಯುವ ತನಕ ಒಬ್ಬರಾಧೀನಳಾಗದೆ ಸುಖದಿಂದ ಕಾಲಹರಣ ಮಾಡಲಿ.

**ಮಾಲತಿ**–ಆಗಲಿ, ಇದೋ ತೆಗೆದುಕೋ! ಬಡವರು ಭಾಗ್ಯಶಾಲಿಗಳಾಗುವದೇ ನನಗೆ ಬೇಕು

**ದಾಸಿ**-ಆಗಲಮ್ಮಾ, ನಿಮಗೆ ದೇವರು ಕಲ್ಯಾಣಮಾಡಲಿ, ಆದರೆ ನನಗುಟ್ಟು ಕೊಳ್ಳಲಿಕ್ಕಿದೊಂದೇ ಸೀರೆ ಇದೆ ಇದನ್ನು ಕೊಟ್ಟು ಹಾಕಿದ ಬಳಿಕ ನಾನೇನುಟ್ಟುಕೊಳ್ಳಲಿ ?

**ಮಾಲತಿ**–ನಡೆ, ಇಲ್ಲಿಯೇ ಹತ್ತಿರಕ್ಕೆ ನನ್ನ ಮನೆ ಇದೆ ಅಲ್ಲಿ ಬೇರೊಂದು ವಸ್ತ್ರವನ್ನು ಕೊಡುತ್ತೇನೆ ಆ ಮೇಲೇನು ?

**ದಾಸಿ** ಹಾಗಾದರೆ ಪರವಿಲ್ಲ ನಡೆಯಿರಿ (ಹೋಗುವಾಗ್ಗೆ ರತ್ನಮಾಲೆಯನ್ನು ನೋಡಿ ನಗುತ್ತ) ಅಹಹಾ! ಹೇಗೊಂದರಘಳಿಗೆಯಲ್ಲಿ ಭಾಗ್ಯವಂತಳಾದೆನು. ಇದಕ್ಕನ್ನಬೇಕು ದೈವಾ (ಸರ್ವರೂ ಹೋಗುವರು)

## ಕಾರಾಗೃಹ

**ಸಿಪಾಯಿ**–(ಗಾಂಜಯನ್ನು ಸೇದುತ್ತಾ) ನಮ್ಮಜ್ಜಯ್ಯಾ ಹೇಳತಿದ್ದಾ ವಿದ್ಯಾಕಲತರ ಬುದ್ಧಿ ಹೋಗತದ. ಅದಕ್ಕೆ ಎಲೇ ಮಾಮ್ಯಕ್ಕಳ್ಯಾ, ನೀವು ಶಾಲೆಗೆ ಹೋಗಲೇಬ್ಯಾಡ್ರಿ. ತಣ್ಣಗ ಮನ್ಯಾಗಿರ್ರೆಂದ ಹೇಳತ್ತಿದ್ದಾ ಆ ಮಾತಿನ ಅನಭವ ನನಗೀಗ ಬಂತಪ್ಪಾ! ಅದೇನಂದ್ರ, ಈ ನನ್ನ ಬಂಗೀಸೊಪ್ಪು ಶಿವಾ, ಮಾದೇವ, ಪರಮಾತ್ಮಾ ಶೇದೋದಲ್ಲ ಅಂದಮ್ಯಾಲ ಈ ವಿದ್ಯಾಕಲ್ತ ಬುದ್ದಿಗಳೆಲ್ಲಾ ಇದು ಕೆಟ್ಟ ಪದಾರ್ಥ ಅದನ್ನು ಮುಟ್ಟಬಾರದು. ಅಂತ ಹೇಳತಾರಲ್ಲಾ ಅದೇನ ? ಒಂದು ಜುರಿ ಎಳದರ ನಂದೀಸಾಮರ್ತ್ಯ ಬರತದ ಎರಡು ಜುರಿ ಎಳದರ ಗರಡನ ಸಾಮರ್ತ್ಯ ಬರತದ. ಮೂರು ಜುರಿ ಎಳದರ ಸಾಕ್ಷಾತ್ ಮುಕ್ಕಣ್ಣನ ಸಾಮರ್ತ್ಯ ಬರತದ. ಹಿಂತಾದನ್ನ ಈ ವಿದ್ಯಾ ಕಲ್ತ ತಲಿಗಳು ಸೇದಬ್ಯಾಡ್ರೆಂತ ಹೇಳತಾವಲ್ಲಾ ಅದೇನ ? ಆ ತಲ್ಯಾಗ

ಹುಳಾಗಿಳಾ ಬಿದ್ದಿರತಾವ್ರೋ ಏನೋ ? ಚಲೋದಕ ಕೆಟ್ಟದು ಕೆಟ್ಟದಕ್ಕ ಚಲೋದು ತಿರುಗಾಮುರುಗಾ, ಉಲ್ಟಾಪಲ್ಟಾ ಹಂತವರುವ್ಯಾಲ ನಮ್ಮಂತವರು ತೆಳಗ ಕಾಲಾನಹಾಗಬಂದದ ಅದಕ್ಕೇನಮಾಡೋದ? ಈ ತಿರುಗಿದ ಕಾಲ ಸಮಾ ಮಾಡೋದಕ್ಕ ಮಾದೇವ, ಪರಮಾತ್ಮಾ, ಒಂದೆರಡತಾಸ ಹೆಚ್ಚಿಗಿಬ್ಯಾಡ ಒಂದೆರಡತಾಸ ಅರಸೊತ್ತಿಗಿಕೊಟ್ಟರ ಎಲ್ಲಾ ಹೇಳತಿದ್ದೆ ಸುದ್ದಿ ಏನುಮಾಡಲಿ ? ಉಪಾಯ ಇಲ್ಲಾ (ಗಾಂಜೀಜುರಿ ಎಳೆದು) ಮಾದೇವ ಪರಮಾತ್ಮ ಉಸಲು ತಿರುಗಿ ಬಿಡೋದಾ ಮಾಡಬಾರದಿತ್ ನೋಡ್ರೆಪಾ ಎಲ್ಲಾ ಹೋಗಿ ಹೊರಟ್ಹೋತ್ (ಮತ್ತೊ ಸೇದಿ) ಹೊಗಿ ಹೊರಗ್ಹೋಗಗೊಡಬಾರದಂತ ನಾನು ಬಲ್ ಯತ್ನಮಾಡತೀನಿ ಅದಾಗವಲ್ಲ. (ಮತ್ತೊ ಸೇದಿ) ಸಜ್ಜಾಗೇದ ಇವತ್ತಿನ ಬಂಗೀಹದಾ ಮಾತ್ರ ಬಲು ಸಜ್ಜಾಗೇದ (ಮತ್ತೊ ಸೇದಿ) ಸಾಕಾತು ಹೊಟ್ಟೆತುಂಬಿತು ಇನ್ನೇನು ಊಟ ಬ್ಯಾಡಾ. ಉಡಗಿಬ್ಯಾಡಾ ಯಾವದೂ ಬ್ಯಾಡಾ ಮಯ್ಯಾಗೆಲ್ಲಾ ಅಮೃತಾನ ತುಂಬಿ ಹೋಯಿತ್ ಆನಂದವೇ ! ಆನಂದಾ

ಚಾಲ್-ಭಳಿರೇಭಾಪುಸೂಗೂರಯ್ಯ ಲಾವಣಿ

ಅಂತಾರೇ ಇದಕಂತಾರೇ ಕೈಲಾಸದ ಸುಖಸಂತ್ವಾರೆ | ಇದಕಿಂತಾ
ಸಂತೋಸಬೈಸುವರು ಬಂಗಿಯುಸೊಪ್ಪುನು ತಿಂತಾರೆ || ಎಲ್ಲಿನೋಡಿದಲ್ಲಿ ಕುಂ
ತಾರೆ | ರಂಬಿಯರು ಕೈಜೋಡಿಸಿ ನಿಂತಾರೆ | ಬುದ್ಧಿಯ್ಯೇನುಬೇಕು ಸಿಪುಗಂ
ತಾರೆ | ಸಾಪಲ್ಲಿಂದರು ಜೀವಾತಿಂತಾರೆ ||೧||

**ಶಂಭುಕ**--(ಸ್ತ್ರೀವೇಷದಿಂದ) ಈಗ್ಗೆ ನನ್ನನ್ನು ಶಂಭುಕನೆಂದಾರು ಹೇಳುವರು? (ಚಿಕ್ಕದೊಂದು ಕನ್ನಡಿಯನ್ನು ನೋಡಿ) ಸೈ ಸೈ ಈ ಸ್ತ್ರೀಭೂಮಿಕೆಯು ಬಹು ಚನ್ನಾಗಿ ಸಾಧಿಸಿರುವದು. (ನಿಂತು ಅತ್ತಿತ್ತ ನೋಡಿ)

ಇದೇ ಕಾರಾಗೃಹವಲ್ಲವೇ ಏನು? ಒಬ್ಬರೂ ಕಾವಲುಗಾರರಿಲ್ಲ ಅದೋ! ಆ ಮೂಲೆಯಲ್ಲಿ ಒಬ್ಬನು ಕೆಮ್ಮುತ್ತ ಖೇಕರಿಸುತ್ತ ಕುಳಿತಿರುವನು. ಅವನೇ ಇಲ್ಲಿಯ ಕಾವಲುಗಾರನೆಂದು ಕಾಣುತ್ತೆ (ಹತ್ತಿರಕ್ಕೆ ಹೋಗಿ) ಅಯ್ಯಾ, ಮಂಥರೆಯಿರುವ ಕೋಣೆಯ ಬಾಕಿಲವನ್ನು ತೆರೆ. ಅವಳ ಸಲುವಾಗಿ ಅನ್ನವನ್ನು ತಂದಿರುವೆನು

**ಶಿಪಾಯಿ**–(ಗಾಂಜಿಯ ಗುಂಗಿನಲ್ಲಿ) ನಮ್ಮ ದುರಿನಲ್ಲಿ ನಿಂತು ಹೆದರಿಕೆ ಇಲ್ಲದೆ ಒದರಿ ಮಾತಾಡುವ ಚದುರಯು ನೀನಾರೆ, ನಿನ್ನ ಮುಖವನ್ನು ತೋರೇ ಮತನ್ತು ನಿನ್ನ ಹೆಸರನ್ನುಸುರೇ ?

**ಶಂಭುಕ**- (ಸ್ವಗತ) ಮಾದಕ ಪದಾರ್ಥವನ್ನು ಸೇವಿಸಿದ ಈ ಮಂಗವು ರಂಗ ಭೂಮಿಯೊಳಗಿನ ಭೂಪತಿಯಾವೇಶದಲ್ಲಿ ಬಂದಿರುವದು ಇದಕ್ಕೆ ತಕ್ಕಂತೆ ಉತ್ತರವನ್ನಿತ್ತು ಶೀಘ್ರವಾಗಿಯೇ ನಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವಾ. (ಪ್ರಕಾಶ) ಶಿರಬಾಗಿಸಿ ಕರಜೋಡಿಸಿ, ಪರಿಪರಿ ಯಿಂದ ಪ್ರಾರ್ಥಿಸುತ್ತ ನಿಂತಿರುವ ನಾನು ತಮ್ಮ ಚರಣಸೇವಕಳಲ್ಲವೆ? ದೇವಾ ದಿವ್ಯಪ್ರಭಾವಾ !

**ಶಿಪಾಯಿ**–ನೀನಿಲ್ಲಿಗೆ ಬಂದ ಕಾರಣವೇನೇ ದಾಸೀ, ಸದ್ಗುಣರಾಶೀ ?

**ಶಂಭುಕ**-ತಮ್ಮ ನಿರ್ಬಂಧದಲ್ಲಿರುವ ಕೈಕಯಾ ಮಹಾರಾಣಿಯವರ ದಾಸಿ ಯಾದ ಮಂಥರೆಯ ಸಲುವಾಗಿ, ಅನ್ನವನ್ನು ತಂದಿರುವೆನು. ದಯ ಮಾಡಿ ಅವಳಿರುವ ಕೋಣೆಯ ಬೀಗವನ್ನು ತೆರೆಯಬೇಕೆಂದು ಪ್ರಾರ್ಥಿ ಸಿಕೊಳ್ಳುವೆನು ದೊರೆಯೇ, ನಿನಗಾರು ಸರಿಯೇ ?

**ಶಿಪಾಯಿ**–ನಾವೇನೀಸ್ಥಳವನ್ನು ಬಿಟ್ಟು ಏಳತಕ್ಕವರಲ್ಲಾ. ಇದೋ, ಈ ಬೀಗದ ಕೈ ತೆಗೆದುಕೊಂಡ್ಹೋಗಿ ಅವಳಿಗೆ ಅನ್ನವನ್ನಿಕ್ಕಿ ತಿರುಗಿ ಬೀಗ

ಹಾಕಿ ಬೀಗವ ಕೈಯನ್ನು ನನ್ನ ಹತ್ತಿರಕ್ಕೆ ತಂದುಕೊಡು. (ಬೀಗದ ಕೈ ಕೊಡುವನು)

**ಶಂಭುಕ**-ಆಗಲಿ, ತಮ್ಮಾಜ್ಞಾನುಸಾರ ವರ್ತಿಸುವೆನು (ಕೀಲಿಯನ್ನೊಯ್ದು ಜೇಲ್ ಬಾಕಿಲನ್ನು ತೆಗೆದು ಒಳಕ್ಕೆ ಹೋಗುವಳು)

**ಶಿಪಾಯಿ**-(ಎಚ್ಚರವಾದಂತೆ ನಟಿಸಿ ಕೀಲಿಕೈಯನ್ನು ಹುಡುಕಿ) ಬೀಗದ ಕೈಗಳ ಗೊಂಚಲವೇನಾಯಿತು ಹೂಂ! ಎಲ್ಲ್ಯಾದರೂ ಇದ್ದೀತು. ಅವಕಾಶ ನೋಡಿಕೊಂಡು ಹುಡುಕ್ಯಾಡೋಣ ಈಗ್ಯಾರೋ, ಇಲ್ಲಿ ಬಂದಾಂಗಾಗಿತ್ತು ಯಾರಬಂದಿದ್ರಪ್ಪಾ! ಕಣ್ಮುಚ್ಚಿದ್ರ ಇದ್ರನಿಂತಾಂಗ ಕಾಣತಾರ. ಕಣ್ ತಗದ್ರಿಲ್ಲ ಇಲ್ಲ, ಹೆಂಗ್ಸನ್ನಬೇಕಾ ಹೆಂಗ್ಸಲ್ಲ ಗಂಡ್ಸನ್ನಬೇಕಾ ಗಂಡ್ಸೂನೂ ಅಲ್ಲಾ. ಹೆಂಗ್ಸೂ ಗಂಡ್ಸು ಕಲ್ತು ಒಂದಾದಂಗಾಗಿತ್ತು. ಮಾರಿನೋಡಿದ್ರ ಹೆಂಗ್ಸು ಮೀಸಿನೋಡಿದ್ರ ಗಂಡ್ಸು. ಒಳ್ಳೆ ತಮಾಸಿ! ಏನಾಗಿದ್ದೀತು ಏನಾರಯಿದ್ದೀತು ನಮಾಗ್ಯಾಕಬೇಕು ವಣಾ ಉಸಾಬರಿ.

**ಶಂಭುಕ**-ಮಂಥರೇ, ತೀವ್ರ ನಡೆ (ಶಿಪಾಯಿಗೆ) ಎಲೊ, ಇದೋ ತೆಗೆದುಕೋ! ನಿನ್ನ ಬೀಗದ ಕೈಯನ್ನು (ಅವನ ಪೈ ಮೇಲೊಗೆದು ಹೋಗುವನು)

**ಶಿಪಾಯಿ**-ಎಲಾ, ಇವಳ ಈ ಗೊಂದ್ಯಾಗೆರಡಾದ್ವು ಒಂದೆಣ್ಣು, ಒಂದ್ಗಡೂ ಗಂಡಿತ್ತಂತ ಹೆಣ್ಂತ್ತು ಹೋಯಿತ್ ಕಡೆಗೆಣ್ಣೂ ಗಂಡೂ ಕೂಡೆಗಡಪ್ಪ ಇದೇನ ಬಂಗಾಳೀ ಯಿದ್ಯಾನೋ ಭಾನಾಮತಿ ಇದ್ಯಾನೋ ಏನಿದ್ದೀತಪ್ಪಾ!

**ಅಧಿಕಾರಿ**-ಏನಿದು, ಕಾರಾಗೃಹದ ಬಾಕಿಲುಗಳು ತೆರೆದಿರುವವು. ಕಾವಲುಗಾರನೆಲ್ಲಿ? ಕಾರಾಗೃಹ ವಾಸಿಗಳು ಕೈಕೊಟ್ಟು ಜಾರಿದರೋ ಏನೋ?

ನೋಡುವಾ (ಒಳಕ್ಕೆ ಹೋಗಿ ನೋಡಿಬಂದು) ಅಯ್ಯೋ, ಪ್ರಮಾದ ವಾಗಿದೆ. ಅರಮನೆಯ ದಾಸಿಯೆಲ್ಲಿ ? ಸರಿ, ಪಲಾಯನ ಮಾಡಿಬಿಟ್ಟ ದ್ದಾಳೆ ಮುಂದೇನುಗತೇ ? ಸುಮಂತರಾಯರೀ ವಾರ್ತೆಯನ್ನು ಕೇಳಿ ದರೆ ನನ್ನ ಪರಿಣಾಮವನ್ನೇನು ಮಾಡುವರೋ ಕಾಣೆ? ಎಲೋ, ಕಾವಲಗಾರರು (ಉತ್ತರವಿಲ್ಲ) (ಅತ್ತಿತ್ತನೋಡಿ) ಇದೋ, ಇಲ್ಲಿ ಯಾವನೋ ಉರುಳಿಕೊಂಡಿದ್ದಾನೆ. (ಅವನಿಗೊದ್ದು ಮುಸುಕನ್ನು ತೆಗೆದು ಕಿವಿ ಹಿಡಿದೆತ್ತಿ) ಅಯ್ಯೋ ಕೋತಿಯ ಮಗನೇ, ಮನಸೋಕ್ತ ಭಂಗೀಸೊಪ್ಪನ್ನು ಸೇದಿ, ಕಾರಾಗೃಹವಾಸಿಗಳನ್ನೆಲ್ಲಾ ಬಿಟ್ಟು ಕೊಟ್ಟ ದ್ದೀಯಾ ? ಶುಂಭನಮಗನೇ ನಡೆ, ಸುಮಂತ ಮಹಾರಾಜರ ಕಡೆಗೆ ಒಯ್ದು ನಿನಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡಿಸುತ್ತೇನೆ. ನಡೆ ಮುಂದಾಗು (ಬಡಿಯುವನು)

**ಶಿಪಾಯಿ**-ಬುದ್ದೀ, ನನ್ಯಾಕಬಡಿತೀರಿ ಏನತಪ್ಪ ಮಾಡೀನ್ರಿ ?

**ಅಧಿಕಾರಿ**-ಮುಪ್ಪಾಗನೇ, ಕಾವಲಿನಲ್ಲಿದ್ದ ಅರಮನೆಯ ದಾಶಿಯೆಲ್ಲಿ? ಮೊದಲು ತೋರಿಸು.

**ಶಿಪಾಯಿ**-ಅಲ್ಲೇ ಕ್ವಾಣ್ಯಾಗಿದ್ದಾಳಾದೀತು ನೋಡ್ರಿಬುದ್ಧಿ ?

**ಅಧಿಕಾರಿ**-ನನಗೇನೇ ನೋಡಲಿಕ್ಕೆ ಹೇಳುವಿಯಾ ? (ಗುದ್ದಿ ಹೊಡೆದು) ಎಲ್ಲಿ ದ್ದಾಳೆ ತೋರಿಸು

**ಶಿಪಾಯಿ**-ತೋರಸತೀನಿ ಹೊಡಿಬ್ಯಾಡ್ರಿ ಬುದ್ಧಿ, (ಹೋಗಿನೋಡಿಬಂದು) ಎಲ್ಲಿದ್ದಾಳಾದೀತಪಾ ಈಗೊಂದತಾಶಿನಮುಂದ ಇಲ್ಲಿಯೇ ಇದ್ಲು

**ಅಧಿಕಾರಿ**-ಎಲ್ಲಿರುವಳೋ ಏ ಕೋಣಾ, ಎಲ್ಲಿರುವಳೋ ? ತೋರಿಸು. ಇಲ್ಲ ದಿದ್ದರ ಹೀಗೆ ನಿನ್ನನ್ನು ಹೊಡೆಹೊಡೆದು ಕೊಂದುಹಾಕುತ್ತೇನೆ.

**ಶಿಪಾಯಿ**-ಅಯ್ಯೋಯೋ! ಬುದ್ಧಿ ಅಷ್ಟುಮಾಡಬ್ಯಾಡ್ರಿ, ತೋರಸತೀನಿ. ಏ ದಾಶಿಮ್ಮಾ, ಏ ಅರಮನೆ ದಾಶಿಮ್ಮಾ, ಬಾ ನನತಾಯಿ ಅಡಿಕ್ಯೊಂ ಬೇಡಾ. ಇಲ್ಲಿ ನನ್‌ಜೀವಾ ತಗೋತರ

**ಅಧಿಕಾರಿ**-ಕಳ್ಳಮುಂಡೇ ಮಗನೇ, ಓಡಿಹೋದ ಬಂದೀವಾಸಿಗಳು ಹೀಂಗೆ ಕರೆದರೆ ಬರುವರೇ? ಅರಮನೆಯ ದಾಶಿಯನ್ನೋಡಿಸಿ, ಭಯಂಕರ ವಾದ ಅಪರಾಧವನ್ನು ಮಾಡಿರುವೆ? ನಡೆ. ಇದರ ಫಲಭೋಗವನ್ನು ಉಣ್ಣುವಿಯಂತೇ? ಸುಮಂತಮಹಾರಾಜರು ನಿನ್ನನ್ನು ಶೂಲಕ್ಕೇರಿಸದೆ ಬಿಡುವರೇ? ನಡೆ ಮುಂದಾಗು (ದಬ್ಬಿಕೊಂಡು ಹೋಗುವನು)

**ಶಿಪಾಯಿ**-ಅಯ್ಯಯ್ಯೋ, ಸೂಲಕ್ಕೇರಸತಾರ

**ಅಧಿಕಾರಿ**-ಏತಕ್ಕೆ ಬಿಟ್ಟಾರು ನಡೆ ಮೊದಲು

**ಶಿಪಾಯಿ**-ಅಯ್ಯಯ್ಯೋ ನನಬಂಗೀಸೊಪ್ಪ ಕಡೆಗೆ ನನ್ನ ಪ್ರಾಣಾತಗೊಳ್ಳಾಕ್ಕಾಶಿದ್ಹಾದ್ಯಾ (ಅಧಿಕಾರಿ ದಬ್ಬಿಕೊಂಡು ಹೋಗುವನು)

**(ವಲ್ಕಲಧಾರಿಗಳಾಗಿ)**

**ರಾಮ**-(ಪ್ರವೇಶ)

ಚೌಲ್-ತಾಭಯಪಡುವದೇತಕೇ ಗೋಪೀಚಂದ

ಸ್ವಾಧೀನವೇನಿದೆ ನರನಾಪರಸಾಧೀನಾ। ಈ ಧರೆಯೊಳು ಒರಿದವೊರೆ
ಯುವ ಧರಿಶೀಮುಮತುವಾ ॥ಪ॥ ಜನಪತಿಯಾಗುವವನೇ ಕ್ಷಣದೊಳು ವನ
ವಸುಸೇರಿ। ಅನುಭವಿಸುವ ದೈನ್ಯವನು ಯುಸಿಶಿದಗಾಧಾ ॥೧॥

ತಮ್ಮಾ ಲಕ್ಷ್ಮಣನೇ, ವೃಥಾ ಏತಕ್ಕೆ ನೀನು ನನ್ನಗೂಡ ವನವಾಸಕ್ಕೆ ಬರುವಿ! ನೀನು ತೀರ ಚಿಕ್ಕವನು ಅಲ್ಲದೇ ಕೇವಲ ಸುಕುಮಾರ ದೇಹಧಾರಿಯು ನಿನ್ನಿಂದ ಕಠಿಣವಾದ ವನವಾಸದ ತಾಪಗಳನ್ನು ಸಹಿಸುವದಾಗಲಿಕ್ಕಿಲ್ಲ ತಿರುಗಿ ನಡೆ.

**ಲಕ್ಷ್ಮಣ**-ಅಣ್ಣನೇ, ವನವಾಸದ ತಾಪಗಳನ್ನು ಸಹಜವಾಗಿ ಸಹಿಸೇನು. ಆದರೆ ನಿನ್ನನ್ನಗಲಿರುವ ತಾಪಗಳನ್ನು ಸಹಿಸುವದು ಮಾತ್ರ ನನ್ನಿಂದಾವಕಾಲಕ್ಕೂ ಆಗದು. ನಿನ್ನ ಸಾನಿಧ್ಯದಲ್ಲಿದ್ದು, ಸದಾ ನಿಮ್ಮೊರ್ವರ ಸೇವೆಯನ್ನು ಮಾಡುತ್ತ ಕಾಲಕಳೆಯುವದರಲ್ಲಿಯೇ ನನಗೆ ಪರಮಾನಂದವು ನಡೆಯಿರಿ ದಯಮಾಡಿ, ನನಗಾತಂಕವನ್ನು ಮಾಡಬೇಡಿರಿ

**ರಾಮ**-ಏನುಮಾಡಲಿ, ಇಂಥ ಕೋಮಲ ಬಾಲಕನನ್ನು ಹೇಗೆ ಕರೆದುಕೊಂಡು ಹೋಗಲಿ! ಅದು ಹಾಗಿರಲಿ ಈ ಸೀತೆಯು

ಚಾಲ್-ಮಧುಮತ್ತಮಧುಪಹೇಭ್ರಮತೀ

ಘನಕೋಮಲ ಬಾಲಕಿಯಿವಳೋ। ವನದಿರಲುಸಿದ್ಧಳಾಗಿಹಳು।
ಬಾಂಧವಾ॥ ಅರಮನೆಯೊಳಿರುವಂಥವಳೂ। ಆರ್ಯಸುಕರ ತಾಗದಿರುವಳೂ
ಬಾಂಧವಾ। ಸೇವಕಜನವೇಷ್ಟಿತಳಿವಳೋ। ಅವನದೊಳಿಂತು ಬಾಳುವಳೋ।
ಬಾಂಧವಾ॥ ಸಂಚರಿಸುವಳಿಂತೀಕಾಂತಾ। ಕಂಟಕಮಯವಾಗಿರುವಂಥಾ।
ಕಾಂತಾರದಿಷೇದಪಿದೆಂಥಾ। ದುರ್ಭಾಗ್ಯರಾಮ ನನ್ನಿಪಳೋ। ಇದಕಾಗಿಯೇ
ನವರಿಸಿದಳೋ॥೧॥

**ಲಕ್ಷ್ಮಣ**-ಇದು ಮಾತ್ರ, ನಿಜವಾದ ಸಂಗತಿಯು. ಅತ್ತಿಗೆಯವರನ್ನು ಕರೆದುಕೊಂಡು ಹೋಗುವದನುಚಿತವು

**ಸೀತಾ**–ಮಾತಾಡಕೂಡದು. ಸ್ವಾಮಿ ಸೇವೆಯನ್ನು ಮಾಡುತ್ತ ವನವಾಸದಲ್ಲಿ ಕಾಲಹರಣ ಮಾಡುವಾಗ್ಗೆ ತಾಪಾತಿರೇಕವಾಗಿ ನನಗೆ ಮೃತ್ಯುಬಂದರೂ ಚಿಂತೆಯಿಲ್ಲ. ಆನಂದದಿಂದ ಸಾಯುವೆನು. ಅದರಿಂದ ನನಗೆ ಸದ್ಗತಿಯಾಗುವದು. ಆದರೆ ಸ್ವಾಮಿಯವರಿಲ್ಲದ ಸ್ಮಶಾನಸಮವಾದೀಯರ ಮನೆಯಲ್ಲಿ ನಾನಾವಕಾಲಕ್ಕೂ ವಾಸಿಸೆನು. ಮೈದುನನೇ, ಬಿಟ್ಟು ಹೋಗುವಾಲೋಚನೆಯೇ ಬೇಡ.

**ರಾಮ**–ಏನುಮಾತಲಿ, ಇವರೀರ್ವರಿಗೆ ಸಮಾಧಾನವನ್ನು ಹೇಗೆ ಹೇಳಲಿ? ಸೀತೆ, ನಿಜವಾಗಿ ನಮಗೆ ವನವಾಸದಿಂದೇನೂ ತಾಪವಾಗಲಿಕ್ಕಿಲ್ಲ. ಸಕುಮಾರತನುಧಾರಿಯಾದ ನಿನ್ನನ್ನು ವನವಾಸದ ಕಷ್ಟದಲ್ಲಿ ನೋಡಿದೆನೆಂದರೆ ನಮಗೆ ಮರಣಪ್ರಾಯ ವ್ಯಥೆಯಾದೀತು

**ಸೀತಾ**-

ಚಾಲ್-ವರಿಗರಿಬಾವೀರಾಜಿಅಬಲಾ

ಸವಿನಯದಿಂ ನಾ ಪ್ರಾರ್ಥಿಸುವೆನು || ತವಸನ್ನಿಧಿಯನು ಅಗಲುವದನ್ನು |
ಜೀವನವೆಂದೆನು ಬೇಡಾ ನೀನು ||ಪ|| ಸತತಗೈವೆನು ಪತಿಸೇವೆಯನು | ಸತಿ
ಗದುಭೂಷಣವಲ್ಲವೇನು ||೧||

**ರಾಮ**–ಉಪಾಯವಿಲ್ಲ ನಡೆ ಮಾಡುವದೇನು, ಗುರುಹಿರಿಯರಾಜ್ಞೆಯನ್ನು ತೆಗೆದುಕೊಂಡು ಮಾರ್ಗಸ್ಥರಾಗುವಾ

ಚಾಲ್-ತಾ ಭಯಪಡುವದೇತಕೇ ಗೋಪೀಚಂದ

ಜನಪತಿಯಾಗುವನನ್ನನು ಕ್ಷಣದೊಳು ವನವಾಸಕೆ ಕಳುಹಿ | ಅನುಭವಿಸುವ
ಸ್ತ್ರೈಣ್ಯಪದವಿಯ ನಿತಿವಗಾಧಾ ಪತನವಾದೀತು ||೧|| (ಹೋಗುವರು)

# ಕೈಕಯಾ ಮಹಾಲ್ (ಪ್ರವೇಶ)

(ರಾಜ ಮಲಗಿರುತ್ತಾನೆ. ವಶಿಷ್ಠ ಸುಮಂತಾದಿತರು ಆತನನ್ನು ಉಪಚರಿಸುತ್ತ ಕೈಕಯಿಗೆ ಪ್ರಾರ್ಥಿಸುತ್ತಿರುವಂತೆ)

**ವಶಿಷ್ಠ**-

ಚಾಲ್-ಜನಸಾರೀಮ ಜಲಾ

ಸೀನೀ ದಗೆಯ ಮಾಗದಿರೇ ಜನನೀ | ಘನತೆಯು ತೋರಿಸು ವಾಣಿಗುಣವಾಣಿ ||
ಜನಪತಿಯನಿತೂ ನೋಡೇ ಕರುಣಾ | ಜನಕವಾದದು ಸ್ಥಿತಿಯಿಂ ತಿರುವನು |
ತನಯನ ವನವಾಸದ ದುರಾಗ್ರಹಾ | ವನುಬಿಡೇ ನಿನಗೆ ಪರಿಕರುಣಿಸುವಾ ||೧||

**ಸುಮಂತ**–ಅಮ್ಮನವರೇ, ರಾಮಚಂದ್ರ ಮಹಾರಾಜರನ್ನು ಬೇಕಾದರೆ ಅರಮನೆಯಿಂದ ಹೊರತೆಗೆದು ಸಮೀಪದ ಉದ್ಯಾನದೊಳಗಿನ ಬೇರೂಂದಾಲಯದಲ್ಲಿರುವಂತೆ ಮಾಡುತ್ತೇವೆ ಮಾತ್ರ ಅವರನ್ನು ಯಾರೂ ದಿಕ್ಕಿಲ್ಲದವರಂತೆ ವನದಲ್ಲಿ ಕಾಲಹರಣಮಾಡುವ ಪ್ರಸಂಗ ವನ್ನು ಮಾತ್ರ ತರಬೇಡಿ. ನಿಮಗೆ ಕೈಜೋಡಿಸುತ್ತೇನೆ

**ಮಂಥರೆ**–ದೇವಿಯವರೇ, ಯಾವಕಾಲಕ್ಕೂ ಇವರ ಸವಿಮಾತುಗಳಿಗೆ ಮರುಳಾಗಬೇಡಿ! ಮೇಲೆ ಗೋಮುಖಿಗಳಂತೆ ಕಾಣಿಸುತ್ತಲಿರುವರು. ನಿಶ್ಚಯವಾಗಿ ಒಳಗೆ ವ್ಯಾಘ್ರಸ್ವರೂಪಿಗಳಿದ್ದಾರೆ ?

**ದಶರಥ**- ಆ ಹುಚ್ಚುಮುಂಡೆಯನ್ನು, ಹೊರಗೆತಳ್ಳಿ!

**ಕೈಕಯಾ**- ಅದೇಕೆ? ನಿಮ್ಮ ಮನಸ್ಸಿನ ವಿರುದ್ಧವಾಗಿ ಹೇಳಿದವಳೆಂದವ ಳನ್ನು ಹೊರಕ್ಕೆ ಹಾಕಬೇಕೋ? ಸೈ ಸೈ! ಚನ್ನಾಗಿದೆ ನನ್ನ ವಿಷಯದಲ್ಲೂ ನನ್ನ ಪರಿವಾರ ಗಣದ ವಿಷಯದಲ್ಲೂ ನಿಮಗೆ ವಳಿತಾದ ಸಹಾನುಭೂತಿಯಿದೆ. ಈಗಲೀಗತಿಯು. ರಾಮನ ವಶಕ್ಕೆ ರಾಜ್ಯವು ಹೋಗಿದ್ದರೇನಾಗುತ್ತಿತ್ತೋ ಏನೋ?

**ಸುಮಂತ**- ಅಮ್ಮನವರೇ, ಇಲ್ಲಿಲ್ಲದ ಕಲ್ಪನೆಗಳನ್ನು ಮಾಡಿ,

**ಕೈಕಯಾ**- ನೀವು ಸಡುವೆ ಬಾಯಿ ಹಾಕುವ ಕಾರಣವಿಲ್ಲಾ. ರಾಜ ನಿಗೂ ನಮಗೂ ವ್ಯವಹಾರವಿದೆ ಇದರಲ್ಲುಳಿದವರ ಸಮ್ಮಂಧವೇನು?

**ಸುಮಂತ**- ಅಮ್ಮನವರೇ, ಈ ಸಾಕೇತ ಸಾಮ್ರಾಜ್ಯದ ಹಿತಾಹಿತದ ಸಮ್ಮಂಧವು ನಮ್ಮ ನಿಮ್ಮೆಲ್ಲರಿಗಿರುವದಂತಲೇ ಇಂತಹ ಪ್ರಸಂಗ ಗಳಲ್ಲಿ ತಿಳಿದ ಮಟ್ಟಿಗೆ ಅಭಿಪ್ರಾಯವನ್ನು ಕೊಟ್ಟೆನು. ಕ್ಷಮಿಸಿರಿ! ಅಲ್ಲದೆ ಜನನೀ, ನೀವು ಸಮ್ರಾಜ್ಞಿಯವರು! ಸಕಲ ಪ್ರಜಾಜನರ

ಮಾತೃ ಸಮಾನರು ಇಂಥವರೇ ಹೀಗೆ ರಾಜಪ್ರಜಾಹಿತ ವಿಘಾತಕ ಕಲ್ಪನೆಯನ್ನು ಮಾಡುತ್ತಹೋದರೆ, ನಾವಾರಮುಂದೆ ದೂರಿಕೊಳ್ಳಬೇಕು.

**ವಶಿಷ್ಠ**- ನಿಜವೇ, ಕೈಕಯಾಮಹಾರಾಣಿಯವರೇ, ತಾವೇ ಹೀಗೆ ದಯಾರಹಿತರಾದರೆ ಪ್ರಜರ ಪರಿಣಾಮವೇನು ?

ಚಾಲ್- ಅರಬೀರಾಗ-ಝಂಪಾತಾಳ

ಮೊರೆಯಕೇಳುವರಾರೆ | ಧರಣೀಶರಾಣಿಯೇ | ಪರಮಪಾವನಮಾನಸೇ ಧರಣಿಪರುಪರಿಪರೀತಾಪಪನ್ನೀಯಲೂ | ದುರಬುದ್ಧಿಯಿಂದ ಪ್ರಜರನ್ನಾಗಲವರಾ ||೧|| ನವಮಾಸಗರ್ಭದೊಳ್ಪೊತ್ತು ಜನ್ಮಪಡಿತ್ತ | ನವಕೋಮಲಾರ್ಭಕವನೂ | ಭುವಿಯಲ್ಲಿ ತಾನೆಪೆತ್ತವಳು ಕೊಲ್ಲುವದುಷ್ಟ | ಹಪಣಿಕೆಯು ಗೈದರಾಗಾ ಮಂಕುಶಿಶುವಿನಾ ||೨||

**ಮಂಥರೆ**- ದೇವಿಯವರೇ, ತಮ್ಮ ಮನೋದಾರಢ್ಯದ ಪರೀಕ್ಷೆಯ ಸಮಯ ವಂದರೆ ಇದೇ ?

**ವಶಿಷ್ಠ**- ಏ ದಾಸೀ, ಮಹಾರಾಣಿಯವರನ್ನು ಇಲ್ಲದ ಹ್ಯಾವಕ್ಕೆ ಹಾಕಿ, ನೀನೆಂತಹ ಪಾಪಾಚರಣೆಯನ್ನು ಮಾಡುತ್ತಿರುವೆ? ನಿಶ್ಚಯವಾಗಿ ಸಾಕೇತ ಸಾಮ್ರಾಜ್ಯ ವೃಕ್ಷದ ಬುಡಕ್ಕೆ ಕುಠಾರವನ್ನಿಕ್ಕಿದೆ ಮಹಾರಾಜರನ್ನು ಮರಣ ಸಂಕಟದಲ್ಲಿ ನೂಕಿದೆ. ನಿನಗೀ ಉಪದ್ವ್ಯಾಪವೇತಕ್ಕೆ ಬೇಕಾಗಿತ್ತು ?

**ಕೈಕಯಾ**- ವಶಿಷ್ಠರೇ, ಸಾಕು ನಮಗೆ ತಮ್ಮ ಬುದ್ಧಿವಾದವನ್ನು ಕೇಳುವ ಅಗತ್ಯವಿಲ್ಲ ನಾನು ಮಾಡಿದ ನಿಶ್ಚಯಗಳಿಂದ ಬೇಕಾದನರ್ಥಗಳಾಗಲಿ! ಬೇಕಾದ ಅಪವಾದಗಳು ಬರಲಿ! ಅವುಗಳನ್ನು ನಾನು ಸಹಿಸಲಿಕ್ಕೆ ಸಿದ್ಧಳಿರುವೆನು.

**ವಶಿಷ್ಠ**- ಹರಿಹರೀ, ಏನು ರಾಜ್ಯಲೋಭವಿದು. ಕುಲವಂತರಾದ ನಿಮಗಿ

ಭೇದಬುದ್ಧಿಯು ಎತ್ತಿಂದ ಬಂತು ? ನಿಶ್ಚಯವಾಗಿ ಸಾಕೇತ ಸಾಮ್ರಾಜ್ಯದ ಮೇಲೆ ಅರಿಷ್ಟದ ಗಾಳಿಯು ಬೀಸಿತು. ಛೀ ! ಇದನ್ನು ನೋಡುವದು ಬಹುಕಷ್ಟ !

**ಕೈಕಯಾ**—ನೋಡುವದಾಗದಿದ್ದರೆ, ಹೋಗಿರಿ, ನೀವು ನಿಮ್ಮಾಶ್ರಮವನ್ನು ಸೇರಿಕೊಳ್ಳಿರಿ ಮತ್ತು ಭರತನ ಆಳಿಕೆಯು ಮುಗಿದು ರಾಮನು ತಿರುಗಿ ಬಂದು ಪಟ್ಟವನ್ನೇರುವ ತನಕ ಹೊರಗೆ ಬರಬೇಡಿರಿ.

**ವಶಿಷ್ಠ**—ತಾಯಿ ಕೈಕಯಾ, ಭರತನ ಆಳಿಕೆಯ ಸಲುವಾಗಿ ನಮ್ಮಗಳಿಗ ನೋಯಿಯಿಲ್ಲ ಕೇವಲ ರಾಮಭದ್ರನ ವನವಾಸದ ಸಲುವಾಗಿಯೇ ಹೀಗೆ ಹೇಳುತ್ತಿರುವೆವು ನೋಡು ! ವಿಚಾರಮಾಡಿನೋಡು ! ಒಬ್ಬ ಮಗನು ರಾಜನಾಗಿ ಸಿಹ್ಮಾಸನದ ಮೇಲೆ ಕುಳಿತಿರಬೇಕು; ಇನ್ನೊಬ್ಬ ಮಗನು ಕಾನನದಲ್ಲಿ ಕಷ್ಟಪಡುತ್ತ ಸಂಚರಿಸಬೇಕು. ಒಬ್ಬ ಮಗನು ಐಶ್ವರ್ಯದಲ್ಲಿ ಲೋಲಾಡಬೇಕು ಇನ್ನೊಬ್ಬ ಮಗನು ದಾರಿದ್ರ್ಯದಲ್ಲಿ ಹೊರಳಾಡಬೇಕು ಒಬ್ಬ ಮಗನು ಹಂಸತೂಲಿಕಾತಲ್ಪದ ಮೇಲೆ ಆನಂದದಿಂದ ಮಲಗಬೇಕು ಇನ್ನೊಬ್ಬ ಮಗನು ಕಠಿಣವಾದ ಶಿಲಾತಲ್ಪದ ಮೇಲೆ ಕೊರಗುತ್ತ ಬಿದ್ದಿರಬೇಕು. ಒಬ್ಬನು ಮೃಷ್ಟಾನ್ನಗಳನ್ನುಂಡು ಸಂತೋಷಿಸುತ್ತಿರಬೇಕು ಇನ್ನೊಬ್ಬನು ಕಾನನದ ಕಂದಮೂಲಾದಿಗಳನ್ನು ತಿಂದು ಕಷ್ಟ ಪಡುತ್ತಿರಬೇಕು ಹೊಟ್ಟೆಯ ಮಕ್ಕಳಲ್ಲ ನೀನು ಹೀಗೆ ಭೇದವನ್ನೆಣಿಸಬಹುದೆ ? (ಇಷ್ಟರಲ್ಲಿಯೇ ರಾಮಲಕ್ಷ್ಮಣರು ಸೀತಾಸಮೇತರಾಗಿ ಬರುವರು) ಅಯ್ಯೊ, ಇದೇನು ! ರಾಮಲಕ್ಷ್ಮಣಸೀತೆಯರವಸ್ಥೆಯು ಹೀಗೇಕೆ ? ಕೇವಲ ಭಿಕ್ಷುಕರಂತೆ ವಲ್ಕಲವನ್ನುಟ್ಟುಕೊಂಡು ಹೊರಟಿರುವರಲ್ಲವೆ ? ಇದೇನ ಸಂಬದ್ಧ !

**ರಾಮ**-ಅನಾಯಾಸವಾಗಿ ಒಳಿತಾಯಿತು ಗುರುಹಿರಿಯರೆಲ್ಲರೂ ಇಲ್ಲಿಯೇ ಇದ್ದಾರೆ ಅಪ್ಪಣೆಯನ್ನು ತೆಗೆದುಕೊಂಡು ವನವನ್ನು ಸೇರುವಾ ಭಗವಾನರೇ,

ಚಾಲ್-ಗಮಲೀಮನಾಬನಾವಲಿ

ಶಿರಬಾಗುವೇಗುರುರಾಯನೇ | ಈ ರಾಮನಿ | ಗೊರೆವುದಾಜ್ಞಾ || ಘನ
ಕವಚನಾ | ಪನುನಡಿಸಲು | ವನಕೆಪೋಪಾತಾನೀಗ ||೧||

**ದಶರಥ**-ಏನು ! ನನ್ನ ರಾಮನು ವನವಾಸಕ್ಕೆ ಸಿದ್ಧನಾದನೇ ?

**ಸುಮಂತ**-ಅಹುದು ದೇವಾ, ಮತ್ತು ಅದರ ಸಿದ್ಧತೆಯಿಂದಲೇ ಬಂದಿರುವರ ನೋಡಿ.

**ರಾಮ**-ತಾತಾ, ನಮಗೆ ಅಪ್ಪಣೆಯನ್ನು ದಯಪಾಲಿಸಿರಿ !

**ದಶರಥ**-ಯಾರಲ್ಲಿ, ಮೊದಲು ರಾಜುಡುಪುಗಳನ್ನು ತೆಗೆದುಕೊಂಡು ಬನ್ನಿ ನನ್ನ ಕೂಸುಗಳನ್ನು ಈ ಹೇಸಿವೇಷದಲ್ಲಿ ನೋಡಲಾರನು

**ಕೈಕೆಯಾ**-ನಿಲ್ಲಿ, ಯಾರೂ ಏನೂ ತರಲಾಗದು ಈ ಸಾಕೇತ ಸಾಮ್ರಾಜ್ಯದ ಸ್ಥಿರಚರಾಸ್ಥಿಗಳೆಲ್ಲವೂ ಭರತನಿಗೆ ಸೇರಿದವು

**ರಾಮ**-ನಿಜವಾದ ಸಂಗತಿಯು, ವಚನ ಪೂರ್ಣವಾಗುವ ತನಕ ಈ ಸಾಕೇತದ ವಿಷ್ಪತ್ತುಗಳಿಗೆ ನನ್ನದೇನೂ ಸಮ್ಮಂಧವಿಲ್ಲ

**ದಶರಥ**-ಈ ಮಾರಿಯನ್ನೇನು ಮಾಡಲಿ ? ಇದರ ಚರ್ಮವನ್ನು ಸುಲಿದು ಸುಡಿಸಿಬಿಡಲೋ ? ಏನು ಮಾಡಲಿ ? ರಾಮಾ, ಬಿಡು ಈ ಹೇಸಿವೇಷದ ವಿಸರ್ಜನೆಯನ್ನು ಮಾಡಿಬಿಡು. ನನಗಿದನ್ನು ನೋಡಿ ಮರಣಪ್ರಾಯ ದುಃಖವಾಗುತ್ತಲಿದೆ ?

**ರಾಮ**–ತಾತಾ, ಹೀಗೇಕೆಮಾಡುವಿ? ಅಡವಿಯಲ್ಲಿ ರಾಜಾಡುವುಗಳ ಪ್ರಯೋಜನವೇನು ?

**ದಶರಥ**–ನಿನ್ನನ್ನು ನಾನು ಕಾನನಕ್ಕೆ ಹೋಗಗೊಡುವದಿಲ್ಲಾ

**ಕೈಕಯಾ**–ಇರಲಿಕ್ಕೆ ಮಾರ್ಗವಿಲ್ಲಾ.

**ದಶರಥ**-ನೀನು ಮಾತಾಡಬೇಡ. ರಾಕ್ಷಸೀ, ನಿರ್ದಯೀ, ಕುಲಟೀ,

**ಕೈಕಯಾ**-ರಾಜನೆ, ಖಂಡಿತವಾಗಿ ಒಂದು ಮಾತು ಹೇಳಿಬಿಡು ರಸಕಸೆಯು ಬೇಡ ! ಕೊಟ್ಟವಚನಕ್ಕನುಸರಿಸಿ ನಡೆಯುವಿಯೋ ಇಲ್ಲವೋ ?

**ದಶರಥ**–ಇಲ್ಲ ಹೋಗು. ನಡೆಯುವದಿಲ್ಲಾ.

**ರಾಮ**–

ಚಾಲ್-ಝಂಪಾತಾಳ-ಸೋಹನೀರಾಗ

ಈ ತೆರದಿವಚಿಸದಿರುತಾತನೇ ಪರಮವಿಖ್ಯಾತನೇ । ಕ್ಷಿತಿಯೊಳಾದೀತು ಅಪಕೀರ್ತಿ ॥ ದಿನಮಣಿಯವಂಶದೋಳ್ । ಜನಿಸಿದ ನೃಪಾಲರೂ । ಘನಸತ್ವಶೀಲರೆಂದಿರುವದೈಖ್ಯಾತೀ ॥೧॥ ಜ್ಞಾನಸಂಪನ್ನನೇ ! ಹೀನವ್ಯಾಮೋಹದಾ । ಧೀನನಾಗುವದು ಮಹದನುಚಿತವುಕೇಳೈ ॥ ೨ ॥

**ದಶರಥ**- ಹಾಗಾದರೇನುಮಾಡಲಿ? ರಾಮಾ, ರಾಜ್ಯಲೋಭಿಯಾದ ಈ ರಾಕ್ಷಸಿಗೆ ಸಂಪೂರ್ಣ ರಾಜ್ಯವನ್ನು ಬಿಟ್ಟುಕೊಟ್ಟದ್ದೇನೆ ಮನಸ್ಸು ಬಂದಹಾಗೆ ವೈಭವದಲ್ಲಿವಳು ಮೆರೆಯಬಹುದಲ್ಲವೇ? ನಿನಗೆ ವನವಾಸವನ್ನೇತಕ್ಕೆ ನೆನೆಯಬೇಕು?

**ಕೈಕಯಾ**- ಹಾಗೆ ನನ್ನಪೇಕ್ಷೆಯಿದೆ.

**ವಶಿಷ್ಠ**- ತಾಯಿಾ, ಮಕ್ಕಳನ್ನು ಕಾನನವಾಸದ ಕಷ್ಟದಲ್ಲಿ ನೋಡಬೇಕೆನ್ನುವದಿದೆಂತಹ ಅಪೇಕ್ಷೆಯು?

**ಕೈಕಯಾ-** ನಿಮ್ಮ ಧರ್ಮಶ್ರವಣವು ನನಗೆ ಬೇಕಾಗಿಲ್ಲವೆಂದೊಂದು ಸಾರೆಹೇಳಿರುವೆನಲ್ಲವೇ ?

**ವಶಿಷ್ಠ-** ಥೂ! ಮದಾಂಧಳೇ, ಇಂತಹ ನೀಚವಾಂಛಿತೆಯಾದ ನೀನು ಮಾರ್ಜಾಲಿಯಾಗಿ ಜನಿಸಬಹುದಾಗಿತ್ತು; ಏತಕ್ಕೆ ಮಾನವಳಾದೆ? ಷಡ್ಗುಣೈಶ್ವರ್ಯ ಸಂಪನ್ನನೂ, ಸುಕುಮಾರನೂ ಮತ್ತು ಸುಮನೋಹರನಾದ ನನ್ನ ಶ್ರೀರಾಮಭದ್ರನನ್ನು ಕಾನನದ ಕಷ್ಟಕ್ಕೆ ಗುರಿಮಾಡುವ ನಿನ್ನ ಮುಖಾವಲೋಕನವನ್ನು ಮಾಡಬಹುದೇ ?

**ಕೈಕಯಾ**-ಹಾಗಾದರೇತಕ್ಕೆ ಮಾಡುತ್ತ ಇಲ್ಲಿ ನಿಂತಿರುವಿ ? ಹೊರಟು ಹೋಗು.

**ರಾಮ**-ಮಾತೇ, ತಪೋನಿಧಿಗಳ ಮನವನ್ನು ನೋಯಿಸಬೇಡ

**ವಶಿಷ್ಠ**-ರಾಕ್ಷಸೀ ನೋಡಿದೆಯಾ ? ನನ್ನ ರಾಮನ ಚರಣಗಳೆಷ್ಟು ಕೋಮಲವಾಗಿವೆ ? (ಅಳುತ್ತ) ಇವುಗಳಿಂದ ಕಾನನದ ಕಂಟಕಮಯ ಪ್ರದೇಶದಲ್ಲಿ ನಡೆಯುವದಾದೀತೇ ? ಅದನ್ನು ಬಿಡು. ಪತಿಯಗೂಡ ವನವಾಸಕ್ಕೆ ಸಿದ್ಧಳಾದ ಈ ನನ್ನ ಚಿಕ್ಕ ಹೆತ್ತಮ್ಮನನ್ನಾದರೂ ನೋಡು ನವನೀತಕ್ಕಿಂತಲೂ ಮೃದುವಾದ ದೇಹವಲ್ಲವೇ ? ಈ ನನ್ನ ತಾಯಿಯು ಎಂದಾದರೂ ಬಿಸಿಲು ನೋಡಿದವಳೇ ! ಗಾಳಿ ಚಳಿ ಮಳೆಗಳಲ್ಲಿ ತಿರುಗಾಡಿದವಳೇ ! ಕಲ್ಲುಮುಳ್ಳುಗಳನ್ನು ತುಳಿದವಳೇ ! ಇವಳನ್ನಾದರೂ ನೋಡಿ ನಿನ್ನ ದುರ್ವಿಚಾರಗಳನ್ನು ಬಿಟ್ಟುಕೊಡು

**ಕೈಕಯಾ**-ನಾನೇನವಳಿಗೆ ವನವಾಸಕ್ಕೆ ಹೋಗುವವಕ್ಕಾಗಿ ಹೇಳಿಲ್ಲವಲ್ಲಾ

**ದಶರಥ**-ಎಲೇ ಕೃತ್ಯಾ, ನೀನು ಹೇಳಲಿಕ್ಕೆಬೇಕೇ ? ಪತಿಯ ಸುಖದುಃಖಾದಿಗಳಿಗಾನನದಿಂದ ಭಾಗಿನಿಯಾಗುವವನ್ನು ಈ ಚಿಕ್ಕ ಪತಿವೃತಾರತ್ನಕ್ಕೆ

ನೀನು ಹೇಳಬೇಕೇ ? ನಿನಗಷ್ಟೊಂದಧಿಕಾರವಲ್ಲಿ ? ನೀನು ಕುಲಟೆಯು, ಅಸತಿಯು, ಪತಿತಳು ಪತಿಯನ್ನು ಮರಣಕ್ಕೆ ಗುರಿಮಾಡುವ ಮಾರಿಯು ನಿನ್ನನ್ನು ನಾರಿಯೆಂದು ನಿರ್ಮಿಸಿದ ಬ್ರಹ್ಮನ ಕರಗಳಿಗೆ ಧಿಃಕಾರವಿರಲಿ.

**ಕೈಕಯಾ**-ಏನಿದು ರಂಥೆ, ಏನಿದು ಸತ್ಯವಂತರ ಮುಸುಡಿ, ಏನು ಸೂರ್ಯ ವಂಶದ ಪ್ರಕಾಶಾ! ಸತ್ವಶಾಲಿಗಳೆಂಬ ಲೌಕಿಕವನ್ನು ಸಂಪಾದಿಸಿ ಲೋಕಕ್ಕೆ ಜಂಭವವನ್ನು ತೋರಿಸುವ ಡಂಭಾಚಾರಿಗಳಾದ! ನೀವು ರವಿಕುಲದ ರಾಜರು! ಆಶ್ರಮದೊಳಗಿನ ಕವಿಗಳಿಗೆ ಒಳ್ಳೊಳ್ಳೇಪಾರಿ ತೋಷಕಗಳನ್ನು ಕೊಟ್ಟು ಅವರಿಂದ ನಿಮ್ಮ ಸುಳ್ಳುಚರಿತ್ರಗಳನ್ನು ಸ್ವಾರ್ಥಮೂಲಕವಾಗಿ ಬರೆಸಿದಂತೆ ಕಾಣುತ್ತದೆ ತಿಳಿದಂತಾಯಿತು-ನಿಮ್ಮ ಹಣೇಬರಹ.

**ರಾಮ**-ಅಮ್ಮಾ, ಈಗ್ಗೆ ನಿನಗೆ ಕೊಟ್ಟ ವಚನಗಳು ಸುಳ್ಳಾಗುತ್ತಿದ್ದರೆ ಹಾಗೆ ಹೇಳಬಹುದಾಗಿತ್ತು ನಾನಂತೂ ಆ ವಚನವನ್ನು ಸತ್ಯಮಾಡುವ ಸಿದ್ಧತೆಯಿಂದಲೇ ಬಂದಿರುವೆನಲ್ಲವೇ ?

**ಕೈಕಯಾ**-ನನಗೆ ಹಾಗೆ ತೋರುವದಿಲ್ಲ. ವಚನವನ್ನು ಸತ್ಯಮಾಡುವದಕ್ಕಾಗಿ ನೀನೀವೇಷವನ್ನು ಧರಿಸಿದ್ದಾದರೇ ಇಷ್ಟು ವಿಲಂಬವನ್ನೇ ಮಾಡುತ್ತಿದ್ದಿಲ್ಲ ಮತ್ತು ನಿನ್ನನ್ನು ನಿಲ್ಲಿಸಿಕೊಳ್ಳುವದಕ್ಕಾಗಿ ಅಟ್ಟಹಾಸವನ್ನು ಮಾಡುತ್ತಲಿರುವೀ ಜನಗಳಿಗೆ ಹೀಗೆ ಅವಕಾಶವನ್ನು ಕೊಡುತ್ತಿದ್ದಿಲ್ಲ. ನೀನು ರಂಗಭೂಮಿಯೊಳಗಿನ ರಕ್ಕನಟನಂತೆ ವನವಾಸದ ವೇಷವನ್ನು ಧರಿಸಿಕೊಂಡು ಬಂದಿರುವೆ. ನಿನ್ನ ಮನಸ್ಸಿನಲ್ಲಿ ನಿಜವಾಗಿ ಕಾನನಕ್ಕೆ ಹೋಗುವದೇ ಇಲ್ಲ ಹಾಗೆ ಅಭಿನಯವನ್ನು ಮಾತ್ರ ಮಾಡುತ್ತಿರುವೆ. ಅಲ್ಲದೆ ಅಭಿನಯಕಲಾಪಟುವಾದ್ದ ನೀನು ನಿನ್ನೊಡನೆಯೇ ಇವರೀರ್ವರಿಗೂ ಒಳಿತಾದ ಶಿಕ್ಷಣವನ್ನು ಕೊಟ್ಟಿರುವೆ.

**ಲಕ್ಷ್ಮಣ**–ಮಾತೇ, ಅಧಿಕ ಪ್ರಸಂಗದ ವಿಷಯವಾಗಿ ಕ್ಷಮಿಸು ಈ ನನ್ನ ದೇವಸದೃಶನಾದಣ್ಣನು ದಾಂಭಿಕನಲ್ಲವೆನ್ನುವದು ಖಂಡಿತವಾದ ಮಾತು; ಈಗ್ಗೆ ಮನೆಯನ್ನು ಬಿಟ್ಟು ಹೋದಮೇಲೆ ತಾನೇ ಅದು ನಿರ್ಣಯವಾಗುವದು. ನೀನು ಮಾತ್ರ ದುರ್ಭಾಗ್ಯಳು. ಮನೋರಾಜ್ಯ ದಲ್ಲಾವದೋ ಒಂದು ಆನಂದಮಯ ಕಲ್ಪನೆಯನ್ನು ಕಲ್ಪಿಸಿದವಳಾಗಿ ರಾಮಪಟ್ಟಾಭಿಷೇಕಕ್ಕೆ ವಿಘ್ನವನ್ನು ತಂದಿರುವದೇನೋ ಸಹಜ ಆದರೆ ಆ ನಿನ್ನ ಮನೋರಾಜ್ಯದೊಳಗಿನ ಆನಂದಮಯ ಕಲ್ಪನೆಗಳು ಅಲ್ಲಿಯೇ ಲಯವಾಗಿ ಪ್ರತ್ಯಕ್ಷ ರಾಜ್ಯದಲ್ಲಿ ನೀನು ಎತ್ತನೋಡಿದತ್ತ ಭೂತಭೇತಾದಿಗಳ ಸ್ಮಶಾನ ರಾಜ್ಯದ ಭೀಷಣಚಿತ್ರವನ್ನು ನೋಡು ವದೇ ನಿಜ.

**ಎಲ್ಲರೂ**-ಸತ್ಯವಾಗಿ ಹೇಳಿದೆ.

**ಕೈಕಯಾ**-ಕಾಲ್ಪನಿಕ ಚಿತ್ರದ ಭಯವನ್ನು ತೋರಿಸಿದ ಮಾತ್ರಕ್ಕೇ ಕೃತ ನಿಶ್ಚಯದಿಂದ ನಾನೇನು ಪರಾವರ್ತನ ಹೊಂದತಕ್ಕವಳಲ್ಲ ವೃಥಾ ಚರ್ವಿತಚರ್ವಣವು ಬೇಡ. ರಾಮಾ, ತೀವ್ರವೇ ಏನಾದರೊಂದು ಸೋಕ್ಷಮೋಕ್ಷವನ್ನು ಮಾಡುವಿಯೋ ಇಲ್ಲವೊ? ಹೇಳು. ವೃಥಾಕಾಲ ಹರಣವು ಬೇಡಾ. ನಿಮ್ಮ ಈ ರಗಳೆಯನ್ನು ಕೇಳಿ ಕೇಳಿ, ನನಗೆ ಬೇಸ ರವಾಗಿದೆ.

**ರಾಮ**-ಆಗಲಿ, ಮಾತೇ, ಹೋಗಿ ಬರುವೆನು. ಪಿತನೇ, ಮೋಹಪರವಶ ನಾಗಿ ವ್ಯಸನಪಡಬೇಡ; ಹೋಗಿಬರುವೆನು. ವಶಿಷ್ಠ ಗುರುಗಳೇ. ನಮಸ್ಕರಿಸುವೆನು.

**ವಶಿಷ್ಠ**–(ಅಳುತ್ತ) ರಘುವಂಶ ನಾಥನೇ, ಏನೆಂದಾಶೀರ್ವಾದವನ್ನು ಕೊಡಲಿ! ಅಯ್ಯೊ, ಎಂತಹ ಕಷ್ಟವು? ಇಷ್ಟುಜನ ಗುರುಹಿರಿಯರಿದ್ದು



ವಶಿಷ್ಟ- ರಘುವಂಶ ನಾಥನೇ, ಏನೆಂದಾಶೀರ್ವಾದವನ್ನು ಕೊಡಲಿ !

ನಿನ್ನನ್ನು ಅಡವೀಪಾಲು ಮಾಡಬೇಕಾಯಿತೇ ? ಇದನ್ನು ನೋಡುವ ದಕ್ಕಿಂತ ಮುಂಚಿತವಾಗಿಯೇ ಈ ದುಷ್ಟದೇಹವೇತಕ್ಕೆ ಮಣ್ಣುಪಾಲಾ ಗಲಿಲ್ಲಾ. ರಾಮಾ, ರಾಮಾ, ರಾಮಾ, ಮುಖದಿಂದ ನುಡಿಗಳು ಹೊರಡದಂತಾದವು.

**ರಾಮ**-ಭಗವಾನ್, ಸೈರಿಸಿರಿ ಸೈರಿಸಿರಿ. ಹದಿನಾಲ್ಕು ವರ್ಷಗಳ ನಂತರದಲ್ಲಿ ನಿಮ್ಮ ಚರಣಗಳ ದರ್ಶನಕ್ಕೆ ಬಂದೇ ಬರುವೆನು. ಸುಮಂತ್ರರೇ, ಹೋಗಿ ಬರುವೆನು.

**ಸುಮಂತ**-ದೇವಾ, ತಮ್ಮೊಡನೆ ಬರುವದಕ್ಕೆ ನನ್ನೊಬ್ಬನ ಸಲುವಾಗಿ ಮಾತ್ರ ಅಪ್ಪಣೆಯಾಗಬೇಕು. ನಾನಿಲ್ಲಿರಲಾರೆನು. ಭವಿಷ್ಯಕಾಲದ ಸಾಕೇತ ಸಿಹ್ಮಾಸನದ ಸೇವೆಯನ್ನು ಮಾಡಲಾರೆನು. ಇಂದಿನತನಕ ನಂದನವನಾನಂದವನ್ನು ಅನುಭವಿಸಿದ ನನ್ನನ್ನು ಕಿಚ್ಚು ಸುತ್ತಿಕೊಳ್ಳು ತ್ತಲಿರುವ ಕಾಡಿನಲ್ಲಿ ಬಿಟ್ಟು ಹೋಗಬೇಡಿರಿ ಭವಿಷ್ಯಕಾಲದ ಸಾಕೇತ ಸಾಮ್ರಾಜ್ಯದ ಚಿತ್ರವನ್ನು ನೆನಿಸಿಕೊಂಡರೆ ಮೈಮೇಲೆ ರೋಮಾಂಚ ಗಳು ಬರುತ್ತವೆ.

**ರಾಮ**-ಅಂತಹ ಕಠಿಣ ಪರಿಸ್ಥಿತಿಯಲ್ಲಿ ಬರುವ ಸಾಕೇತ ಸಾಮ್ರಾಜ್ಯವನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಹೋಗುವ ಬುದ್ಧಿಶಾಲಿಗಳು ನಿಮ್ಮ ವಿನಃ ಮತ್ತಾರು ? ತಸ್ಮಾತ್ ನೀವು ನನ್ನಗೂಡ ಬರುವ ಹವ್ಯಾಸವನ್ನು ದಯಮಾಡಿ ಹಿಡಿಯಬೇಡಿರಿ. ಅಸ್ತು. ಕಾಲಕ್ರಮಣವನ್ನು ಮಾಡಿ ಮಾತೆಯ ಸಂಶಯವನ್ನು ಹೆಚ್ಚಿಸುವದೇಕೆ ? ನಡೆ ಲಕ್ಷ್ಮಣನೇ, ಸೀತೇ ನಡೆ. ಮಾತೇ, ಹೋಗಿಬರುವನು; ಅಪ್ಪಣೆಯನ್ನು ದಯಪಾಲಿಸು.

**ಕೈಕಯಾ**-ನಿನಗೆ ಅಪ್ಪಣೆಯನ್ನು ಕೊಟ್ಟುಕೊಟ್ಟು ಬೇಸತ್ತೆನು.

**ರಾಮ**-ಇದೋ ಹೊರಟೆನು. ಕ್ಷಣಮಾತ್ರ ಇಲ್ಲಿ ನಿಲ್ಲುವದಿಲ್ಲ.

**ರಾಮ**–

ಚಾಲ್-ದುರಾಭಿಮಾನಿಮಾನವಾ

ನಮೋನಮೊ ದಿಗಂಬರಾ | ನಮೋ ಹಿಮಾಂಶುಶೇಖರಾ | ಮಾರಾರಿಕರು
ಣಾಮೃತದಾ | ಪಾರಾವಾರನಮೋನಮೋ ॥ ಮೂರುಲೋಕಗಳಿಗಾಧಾರನಮೊ ॥

**ದಶರಥ**–(ಎಚ್ಚತ್ತು) ವಶಿಷ್ಠರೇ, ರಾಮನೆಲ್ಲಿ ?

**ವಶಿಷ್ಠ**–ರಾಜಾ, ಘಾಬರಿಯಾಗಬೇಡ. ಅವನು ಸೀತಾಲಕ್ಷ್ಮಣ ಸಹಿತ ನಾಗಿ ಕಾನನಕ್ಕೆ ಹೊರಟುಹೋದನು.

**ದಶರಥ**–ಕಾನನಕ್ಕೆ ಹೋದನೆ ? ಹನ್ನೆರಡು ವರ್ಷಗಳ ತನಕ ಅವನು ತಿರುಗಿ ಬರುವದಿಲ್ಲವೇ ?

**ಸುಮಂತ**–ಬರಲಿಕ್ಕೆ ಮಾರ್ಗವೆಲ್ಲಿದೆ ? ತಮ್ಮ ವಚನವನ್ನು ಸತ್ಯಮಾಡುವ ದಕ್ಕಾಗಿ ಅವರು ಹದಿನಾಲ್ಕು ವರ್ಷ ವನವಾಸಿಗಳಾಗೇ ಇರುವರು.

**ದಶರಥ**–ಅಯ್ಯೋ ದೈವವೇ, ನನ್ನ ನೀಲಮೇಘಶಾಮನು ನನ್ನನ್ನು ಬಿಟ್ಟ ಹೋದನೇ ? ಮುಪ್ಪಿನವನಾಗಿ ಪ್ರಾಣ ತಪ್ಪಿದ ನನ್ನನ್ನು ಬಿಟ್ಟ ಹೋದನೇ ?

**ಸುಮಂತ**-ಹಾಗಾದದ್ದೇನೋ ನಿಜ.

**ದಶರಥ**–ಹದಿನಾಲ್ಕ ವರ್ಷಗಳ ತನಕ ನಾನವನನ್ನು ಕಾಣುವದಿಲ್ಲವೇ ?

**ವಶಿಷ್ಠ**–ಇಲ್ಲ, ಹದಿನಾಲ್ಕು ವರ್ಷಗಳ ತನಕ ರಾಮನು ನಮ್ಮೆಲ್ಲರಿಗೆರವಾದನು.

**ಸುಮಂತ**-ಮಹಾರಾಜರೇ, ರಾಮಚಂದ್ರ ಮಹಾರಾಜರು ನಿಶ್ಚಯವಾಗಿ ವನಕ್ಕೆ ಹೋದರು ಪುನಃ ನಮಗವರ ದರ್ಶನವಾಗಬೇಕಾದರೆ ಹದಿ ನಾಲ್ಕು ವರ್ಷಗಳ ನಂತರದಲ್ಲಿ.

**ದಶರಥ**–ರಾಮನು ಹೋಗಿಬಿಟ್ಟನೇ ?

**ವಶಿಷ್ಠ**–ಅಹುದು, ನಿಶ್ಚಯವಾಗಿ ಹೋದನು.

**ದಶರಥ**-ಅವನಗೂಡ ಕಂದಮ್ಮಗಳಾದ ಸೀತಾಲಕ್ಷ್ಮಣರು ಸಹ ಹೋದರೆ?

**ಸುಮಂತ**-ಅಹುದು ಮಹಾರಾಜರೇ

**ದಶರಥ**–ಅಯ್ಯೋ ದೈವವೇ, ದಾರುಣವಾದ ಪುತ್ರವಿಯೋಗ ದುಃಖವನ್ನು ಹೇಗೆ ಸಹಿಸಲಿ ? ರಾಮಾ, ರಾಮಭದ್ರಾ, ಪಾಪಿಯಾದ ನನ್ನನ್ನು ಬಿಟ್ಟು ಹೋದೆಯಾ ? (ಮೂರ್ಛಿತನಾಗಿ ಬೀಳುವನು)

**ಸುಮಂತ**–ಅಯ್ಯೋ, ಅಯ್ಯೋ, ಮಹಾರಾಜರಿಗೆ ಪ್ರಬಲವಾದ ಮೂರ್ಛೆಯು ಬಂದಿರುವದು. ಉದಕವನ್ನು ತನ್ನಿರಿ.

**ವಶಿಷ್ಠ**–(ರಾಜನ ಹತ್ತರಕ್ಕೆ ಬಂದುನೋಡಿ) ಸುಮಂತಾ, ಮಹಾರಾಜನು ಶಾಶ್ವತವಾದ ವಿಶ್ರಾಂತಿಯನ್ನು ತೆಗೆದುಕೊಳ್ಳುವಂತೆ ಕಾಣುತ್ತದೆ. ನೋಡಿದಿರಾ, ನಾಡಿಗಳು ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟಿರುವವು.

**ಸುಮಂತ**–ಅಯ್ಯೋ, ಸಾಕೇತ ಸಿಂಹಾಸನಾಧೀಶ್ವರನದೀಗತಿಯಾಯಿತೇ! ನೋಡಿದಿರಾ ಭಗವಾನ್, ಮಹಾರಾಜರೇನೋ ಹೇಳಬೇಕೆನ್ನುತ್ತಿರುವರು. ಆದರೆ ಅವರ ಜಿಹ್ವೆಗಷ್ಟು ಶಕ್ತಿಯು ಸಾಲದಾಗಿದೆ. ಒಂದೇ ಸವನೇ ಕಣ್ಣೀರು ಸುರಿಸುತ್ತಿರುವರು

**ವಶಿಷ್ಠ**-ದಯಾಳುವಾದ ಮಹಾರಾಜನೇ,

ಚಾಲ್-ಆವಚಿತಹೇ ಆಲೇಸಂಕಟ

ಸ್ಥೈರಿಸು ಭೂವರನೇ | ದಾರುಣವ್ಯಥೆಯಾ | ಧರಿಸದೆಮಾನಸವೇ ॥ ಜ್ಞಾನಿಯುನೀನು | ದೀನರಪಾಲ | ನೀನೀತೆರಶೋಕವ ಮಾಳ್ಪರೆ॥ ವಿಧಿಲಿಖಿತವನು ಮೀರುವರಾರೈ | ಸದಯುವಂತನೆ | ಯೋಚಿಸುಬೇಗ ॥೧॥

**ತೃತೀಯಾಂಕ ಸಮಾಪ್ತ.**

# ಚತುರ್ಥಾಂಕ.

## ರಥದಲ್ಲಿ ಭರತನ ಪ್ರವೇಶ. ಸ್ಥಳ-ಅಡವಿ.

**ಭರತ**–ಸಾರಥಿ, ಜನನೀಜನಕರು ಇಷ್ಟಾತುರದಿಂದ ನನ್ನನ್ನೇತಕ್ಕೆ ಕರೆಹಿಸಿ ಕೊಳ್ಳುತ್ತಿರುವರು ! ಹೇಳಲೊಲ್ಲೆಯೇಕೆ ?

**ಸಾರಥಿ**–ಮಹಾರಾಜರೇ, ನಿಜವಾಗಿಯೇ ನಾನೇನೂ ಅರಿಯುವವನು

**ಭರತ**-ಇಲ್ಲ, ನೀನು ಗುಟ್ಟನ್ನು ಕಾಯುತ್ತಲಿರುವೆ ಹಾಗೆ ನಿನ್ನ ಮುಖಲಕ್ಷಣವು ಹೇಳುತ್ತಲಿರುವದು

**ಸಾರಥಿ**-(ಸ್ವಗತ) ಏನಾಗಲಿ, ತಿಳುಹಿನಬಾರದು (ಪ್ರಕಾಶ) ಮಹಾರಾಜರೇ ನಾನೇನೂ ಅರಿಯುದವನು ಹೀಗೆ ಕೇಳಿದರೇನು ಹೇಳಲಿ ?

**ಭರತ**–ಆಗಲಿ, ರಥವನ್ನು ಸಾಗಿಸು ಅಲ್ಲಿ ಹೋದ ಬಳಿಕ ತಾನೇ ಗೊತ್ತಾಗುವದಲ್ಲವೇ ? ಇರಲಿ, ಅಯೋಧ್ಯಾಪಟ್ಟಣವು ಎಷ್ಟು ದೂರದಲ್ಲಿದೆ ?

**ಸಾರಥಿ**-ಇನ್ನೇನು ಹತ್ತಿರಕ್ಕೇನೇ ಬಂದೆವು ಅರ್ಧ ಯೋಜನಕ್ಕಿಂತಲೂ ಕಡಿಮೆ ಇದೆ

**ಭರತ**-ಸಾರಥಿ, ಆದಾವ ಪ್ರಾಣಿಯು ! ಈಚೆಗೆ ಓಡಿಹೋಯಿತು ?

**ಸಾರಥಿ**-ಅದು ನರಿಯಲ್ಲವೇ ದೊರೆಯೇ !

**ಭರತ**-ಏನು, ನರಿಯು ಎಡಕ್ಕೆ ಹೋಯಿತೇ ?

ಚಾಲ್-ಕಾಲಿಬದರಿಯಾ

ಅಶುಭವನೇಕೇ ಸೂಚಿಸುವದು | ವ್ಯಸನವು ನೆಲೆಗೊಂಡಿತು ಸೇವಕನೇ |

ಕಸಪಿಃ ಯು ಪ್ಚಿನತು ಮಾನಸಪಲಿ॥ ಸೊ್ಮುನೇ್ಶು ವಾಯುಸವ್ರು ಪ್ರೀವ್ರು
ಡು | ಎಪಭಾಗಕೆ ಸಂಶಯುಮೆಸಿಷ್ಟಯು ॥೧॥

**ಸಾರಥಿ**-ಮಹಾರಾಜರೇ, ವೃಥಾ ಮನಸ್ಸಿನಲ್ಲಿ ವ್ಯಸನಪಟ್ಟುಕೊಳ್ಳಬೇಡಿ. ನಿಶ್ಚಯವಾಗಿ ಕಾಗೆನರಿಗಳ ಚಲನವಲನಕ್ಕೂ ಮತ್ತೂ ಶುಭಾಶುಭ ಫಲಕ್ಕೂ ಏನೂ ಸಮ್ಮಂಧನಿಲ್ಲ ವಿಧಿಲಿಖಿತವೇ ಮುಖ್ಯವಾದದ್ದು. ರಥವನ್ನು ನಾಗಿಸಲೋ ? ವೃಥಾಕಾಲಹರಣವೇಕೆ ?

**ಭರತ**-ಸಾರಥಿ, ನೀನು ಸಾವಿರ ಮಾತುಗಳನ್ನು ಹೇಳಿದಾಗ್ಯೂ ನನಗೆ ಸಮಾಧಾನವಾಗುವದಿಲ್ಲ. ನಿಜವಾಗಿ ಸಾಕೇತ ನಗರದಲ್ಲೇನೋ ಹೆಚ್ಚು ಕಡಿಮೆಯಾಗಿದೆ ಅದೋ ನೋಡು ನೋಡು —

ಕಾನಡಾ-ತ್ರಿವಟ

ಬಿಮುಬಿಕರಭುಜಂಗಾ | ಹೇಗೆ ನಪಡಿಬಿಯುಮೋಪಥಿ || ಗರಲಾನಸ
ಪನುತೆರದುದರ್ಪದೀ | ಒರೆಯುುಪತೆರಪೀ ಕಾಲರಸನೆಯಾ | ಪೂರಗೆಚಾಚಿ ಪ್ರಾತ್ತ
ರಿಸುತಿರುವಾ | ಪರಿಯುನೋಡಿ ದೋನಾಂಚಗಳೀರ್ವ್ರು ॥೨॥

**ಸಾರಥಿ**-ಮಹಾರಾಜರೇ, ಅತ್ತ ಚಿತ್ತವನ್ನೀಯಬೇಡಿ. ಸಾಕೇತನಗರವನ್ನು ಕಂಡನಂತರದಲ್ಲಿ ಎಲ್ಲಾ ಶುಭಾಶುಭ ಲಕ್ಷಣಗಳ ಪರಿಷ್ಕಾರವಾಗೀ ಹೋಗುವದು ಮಾರ್ಗದಲ್ಲ ವಿಲಂಬವೇಕೆ ? ರಥವನ್ನು ನಡೆಸುವೆನು

**ಭರತ**-ಆಗಲಿ, ನಡೆ (ಹೋಗುವರು)

**ನಾರಾಯಣದಾಸ**-ರಾಮಚಂದ್ರಜೀ ಬನವಾಸ ಗಯೋ; ದಶರಥ ಮಹಾರಾಜ ಮಿರ್ಗಯೋ ಅಬ ಅಜೋಧ್ಯಾಮೇ ಹಮಾರೆ ಪಾಲನವಾಲಾ ಕೋನ ರಹ್ಯೋ ? ಕೀಕಿಯಾರಾಣಿಶಾಬಕಾ ಕಡಕ್ ಮಾಮುಲಾ ಇಸ ಮೇಖ್ಯೆಂ ಜಿಂದಗಾನಿಕರನಾ, ಖ್ಯೆಂ ಹಿಶಾಬ್ ದೇಶಕೂ ಚಲೇಜಾನಾ

ಭೇತ್ತ್ರ ಅರೆ ಆಜಾವ್ರೋ ಶಟಾಣೀ, ಅರೇ ಹರಕಚಂದ (ಬರುವನು) ಬೀಂದರಾಜ ಖ್ಯೆಂಗಯೋ ?

**ಹರಕಚಂದ**-ಬಂಡಿಯೋಂನೋ ತಮಾಮ ಸಮಾನ ಲದ್ವಾ ಕರ್ ದುಸರೇ ರಾಷ್ಟ್ರೀಶೆ ಆಗೆ ಗಿಯೋ

**ನಾರಾಯಣದಾಸ**–ಚಲೋ, ಹಮಕೆಂರಹೆ? ಕ್ಯಾಕಾಮ? (ಹೋಗುವರು)

**ಕೋಮಟಿಶೆಟ್ಟಿ**– ವರಾ ನಂಜುಂಡಾ ರಮ್ಮನ ರಾರಾ ಯೇಮುಂಡೀ ನಾರಾಯಣದಾಸು, ಮೀರು ಯಕ್ಕಡ ?

**ನಾರಾಯಣದಾಸ**-ಅರೆ ಹಮತೋ ದೇಶ್ ಜಾವೇ. ತೂಂಕರೆ ಯಂಕಯ್ಯಾ?

**ಕೋಮಟಿಶೆಟ್ಟಿ**–ಇಕ್ಕಡ ಯೇಮುನ್ನದಿ? ಪೆದ್ದಮಾರಾಜುಡು ಸಚ್ಚಿಪೋಯು ಶ್ರೀ ರಾಮಚಂದ್ರ ಮಹರಾಜುಡು ವನವಾಸಕೀ ಪೋಯೇ ಅಯೋಧ್ಯ ಮುಲಂತ ಸ್ತ್ರೀ ಸಾಮ್ರಾಜ್ಯಮಾಯಿಂತರುವಾತಾ ಇಕ್ಕಡ ಉಂಡೇದಿ ಶಾನ ಘಾತಮು. ದಾನಿವಲ್ಲ ಮೇಮು ಮಾ ದೇಶಾನಿಕಿ ಪೋತು ನ್ನಾಮು.

**ಮಾರವಾಡಿ**-ತುಮ್ಹಾರಾ ದೇಶ ಕೋನಸಾ ?

**ಕೋಮಟಿ**-ಆಂಧ್ರಮು

**ಮಾರವಾಡಿ**–ಓಹೋ ! ಅಂಥಾದೇಶ್ ? ಠೀಕ ಹೈ ಚಲೋ.

**ಕೊತವಾಲ**-ಎಲೋ ನಾಗರಿಕರೇ, ನಿಲ್ಲಿ. ನಗರವನ್ನು ಬಿಟ್ಟು ಹೋಗುವ ದಕ್ಕೆ ರಾಜಾಜ್ಞೆಯಿಲ್ಲ.

**ಮಾರವಾಡಿ**-ಅಜಿ ಓ ಕೊತವಾಲಶಾಬ, ಬಡಾ ಮಾರಾಜಾತೋ ಶತ್ತ ಹೋಗತಾವ. ಫಿರ್ ಕೋನ್‌ಸಾ ಮಾರಾಜಾ ಹುಕುಮ ಕೊಡತಾವ?

**ಕೋಮಟಿ**-ಮಿೂ ದೇಶಮುಲೊ ಉಂಡೇದಾನಕಿ ಮಾ ಇಷ್ಟಮು ಲೇದು.

**ಕೊತವಾಲ**–ಅದೆಲ್ಲವನ್ನೂ ನಾನರಿಯೆ. ರಾಜಾಜ್ಞೆಯಂತೆ ನೀವೆಲ್ಲರೂ ನಡೆಮಕೊಳ್ಳಲೇಬೇಕು.

**ಮಾರವಾಡಿ**–ನಮದು ಮರ್ಜಿ ಭಾಯಿಶಾಬ್. ಜಬರದಸ್ತಿಖ್ಯಂ ಮಾಡತಾವ?

**ಕೊತವಾಲ**–ಸುಮ್ಮನೇ ಹಿಂತಿರುಗಿ. ಹೆಚ್ಚಾಗಿ ಹರಟುವ ಕಾರಣವಿಲ್ಲ, ಏನು ? ತಿರುಗುವಿರೋ ಇಲ್ಲವೋ ?

**ಮಾರವಾಡಿ**–ನಹೀ, ಹಮ ಶಾಪಶಾಪ ನಹೀ ತಿರಗತಾವ ಕ್ಯಾ ಹಮಕು ಮಾರಡಾಲತಾವ ?

**ಕೋಮಟಿ**–ಗಾನಿಗಾನಿ, ಕೊಟತಾವೇಮಯ್ಯಾ ? ಕೊಟ್ಟಿ, ಚೂಸ್ತಾಮು, ಯಟ್ಲ ಕೊಟ್ಟತಾವು ?

**ಕೊತವಾಲ**–ನೀವು ಒಳ್ಳೇ ಮಾತುಗಳಿಂದ ಹಿಂತಿರುಗುವ ಲಕ್ಷಣವಿಲ್ಲ. ಕಡೆಯ ಉಪಾಯವನ್ನೇ ಮಾಡಬೇಕೆಂದು ಕಾಣುತ್ತೆ. ಏನು, ಹಿಂತಿರುಗುವದಿಲ್ಲವೇ ? ನಡೆಯಿರಿ, ಕಳ್ಳಮುಂಡೇಮಕ್ಕಳೇ (ಹೊಡೆಯುತ್ತ ಬಡಿಯುತ್ತ ತಬ್ಬಿಕೊಂಡು ಹೋಗುವನು)

**ಮಾರವಾಡಿ**–ಅರೆ ದೇಖೋ ಬಾಯಿ ದೇಖೋ ! ಕೈಸಾ ಮಾರತಾಹೈ ? ಅರೆ ಬಾಲಾಜೀ, ಕ್ಯಾ ಜುಲುಮ ? ಕ್ಯಾ ಹಿಶಾಬ ? ಅರೆ ಅರೆ ಅರ ! ( ಹೋಗುವರು )

**ಮಾಲತಿ**- (ಪ್ರವೇಶ) ಶಂಭುಕಾ, ಒಂದು ಮಾಡಲಿಕ್ಕೆ ಹೋದರೆ ಮತ್ತೊಂದಾಯಿತಲ್ಲಾ. ಭರತಮಹಾರಾಜರಿಗೆ ನಾವು ಮಾಡಿದ ತಂತ್ರಗಳೆಲ್ಲಾ ಗೊತ್ತಾದರೆ ನಿಶ್ಚಯವಾಗಿ ನಮ್ಮ ಪರಿಣಾಮಗಳು ಒಳಿತಾಗ

ಲಾರವು. ಅದೋ ನೋಡಿದೆಯಾ? ರಾಮಭದ್ರ ಮಹಾರಾಜರು ವನವಾಸಕ್ಕೆ ಹೋದುವರಿಂದ ಈ ಸಾಕೇತ ನಗರವು ಅರ್ಧಕ್ಕಿಂತಲೂ ಹೆಚ್ಚಾಗಿ ಹಾಳುಬಿದ್ದಿತು ಅದರಲ್ಲಿ ಹಿರೇ ಮಹಾರಾಜರು ದಿವಂಗತ ರಾದುದರಿಂದಂತೂ ಪ್ರಜಾಜನರು ದಿಕ್ಕುತಪ್ಪಿದವರಾಗಿ ಮನಬಂದತ್ತ ನಗರವನ್ನು ಬಿಟ್ಟು ಬಿಟ್ಟು ಹೋಗುತ್ತಲಿದ್ದಾರೆ

**ಶಂಭುಕ**-ಯಾವದೇ ಕೆಲಸವಾಗಲಿ ಆಗುವ ತನಕ ಗೊತ್ತಾಗುವದಿಲ್ಲ ರಾಮ ರಾಜ್ಯವಿಯೋಗದ ಪರಿಣಾಮವು ಹೀಗಾಗುವದೆಂದು ಗೊತ್ತಾಗಿದ್ದರ ಯಾರೂ ಭರತಮಹಾರಾಜರ ಪಟ್ಟಾಭಿಷೇಕಕ್ಕೆ ಆಗ್ರಹವನ್ನು ಹಿಡಿ ಯುತ್ತಿದ್ದಿಲ್ಲ ನಿಜವಾಗಿ ಕೈಕಯಾ ರಾಣಿಯವರ ಪರಿವಾರ ಗಣಕ್ಕೆ ಲೋಕೋತ್ತರವಾದ ಅಪಕೀರ್ತಿಯು ಬಂತು.

**ಮಾಲತಿ**-ನಿಜವೇ, ನಮ್ಮೆಲ್ಲರಿಗೂ ಮುಖವೆತ್ತಿ ತಿರುಗಾಡಲಿಕ್ಕೆ ಮಾರ್ಗ ಉಳಿಯಲಿಲ್ಲ ಒಂದು ಸಮಯ ಭರತ ಮಹಾರಾಜರು ಬಂದ ನಂತರ ದಲ್ಲಿ ರಾಜ್ಯ ಸೂತ್ರಗಳನ್ನು ಕೈಕೊಳ್ಳಲಿಕ್ಕೆ ಒಡಂಬಟ್ಟು ತವನುಸಾರ ಕೃತಿಯನ್ನು ಮಾಡಿದರೆ ಒಳಿತು, ಇಲ್ಲದೇ ಹೋದರ ಅವರೂ ಲಕ್ಷ್ಮಣ ಮಹಾರಾಜರಂತೆ ರಾಮಭದ್ರಮಹಾರಾಜರೊಡನೆ ವನವಾಸಿಗಳಾಗುವ ದಕ್ಕೆ ಸಿದ್ಧರಾದರೆ ಏನು ಹೇಳಲಿ ?

**ಶಂಭುಕ**-ಹೇಳುವದೇನು, ಕೇಳುವದೇನು? ಗೂಗೆಯ ತಲೆಯನ್ನು ಕಾಗೆಗಳು ಕುಕ್ಕುವಂತೆ ಇಡೀ ಸಾಕೇತ ನಗರವೇ ಕೈ ತೊಳೆದುಕೊಂಡು ನಮ್ಮ ಬೆನ್ನು ಹತ್ತೀತು ಅಂತಹ ಪ್ರಸಂಗವು ಬರತಕ್ಕದ್ದಿದ್ದರ-ನೋಡು ಮಾಲತೀ-ನಾನು ಮಾತ್ರ ಮೊದಲಿಗೇನೇ ಯಃಪಲಾಯನ ಹೊಡೆ ಯುವೆನು

**ಮಾಲತಿ**–ಎಲೋ, ನೀನು ಗಂಡಸು ಎತ್ತಾದರೂ ಹೋದಿಯೆ, ಹೇಗಾ

ದರೂ ಕಾಲಹರಣ ಮಾಡೀಯೆ. ಆದರೆ ಹೆಂಗಳೆಯರಾದ ನಮ್ಮ ಅವಸ್ಥೆಯು ಮಾತ್ರ ನಾಯಿಗೆ ಬೇಡಾಗುವದು.

**ಮಂಥರೆ**–(ಪ್ರವೇಶಿಸಿ ಮಾಲತೀ ಶಂಭುಕಾದಿಗಳೇ, ಕೈಕಯಾಮಹಾರಾಣಿಯವರ ಪಕ್ಷದವರಾರೂ ಈ ಸಾಕೇತ ನಗರದಲ್ಲಿ ನಿಲ್ಲಬೇಡಿರಿ ತೀವ್ರವೇ ಮನಬಂದತ್ತ ಹೊರಟುಹೋಗಿ.

**ಇಬ್ಬರೂ**-ಮಂಥರೇ, ಮತ್ತೇನಾಯಿತು ?

**ಮಂಥರೆ**-ಆಗುವದೇನು ? ಭರತ ಮಹಾರಾಜರಿಗೆ ಪಟ್ಟವಾಗಬೇಕೆಂತಲೂ ಕೈಕಯಾ ಮಹಾರಾಣಿಯವರ ಪಕ್ಷದ ಜನಗಳ ಅಟ್ಟಹಾಸವು ಯಥೇಷ್ಟವಾಗಿ ನಡೆಯಬೇಕೆಂದಿಷ್ಟು ಸಾಹಸವನ್ನು ಪಟ್ಟಿವಲ್ಲವೇ ?

**ಇಬ್ಬರೂ**-ಅಹುದು, ಈಗೇನಾಯಿತು ?

**ಮಂಥರೆ**-ಭರತಮಹಾರಾಜರು ಈ ನಮ್ಮ ವಿಚಾರಗಳನ್ನು ತಿರಸ್ಕಾರದಿಂದ ನಿಷೇಧ ಮಾಡುವವಲ್ಲದೆ ಈ ಅನರ್ಥಪರಂಪರೆಗಳನ್ನು ಉಂಟುಮಾಡಲಿಕ್ಕೆ ಕಾರಣರಾದ ಸಕಲರನ್ನೂ ಸುಣ್ಣದ ಭಟ್ಟಿಯಲ್ಲ ಹಾಕಿಸಿ ಸುಡಿಸುವ ವಿಚಾರವನ್ನು ಮಾಡುತ್ತಲಿದ್ದಾರ ಆದಕಾರಣ ಮನಬಂದತ್ತ ತೀವ್ರವೇ ಫಲಾಯನಮಾಡಿ; ನಿಲ್ಲಬೇಡಿ.

**ಶಂಭುಕ**-ಅಯ್ಯೋ ! ಹಾಗಿದ್ದರೇತಕ್ಕೆ ನಿಲ್ಲಬೇಕು ? ನಡೆಯಿರಿ. ಅರಮನೆಯಲ್ಲಿ ಕಾಲಿಡುವದೇ ಬೇಡ

**ಕೊತವಾಲ**–(ಪ್ರವೇಶಿಸಿ) ಅರಮನೆಯಲ್ಲಿ ಕಾಲಿಡುವದು ಬೇಡವೇ ಬೇಡ; ಸೆರೆಮನೆಯಲ್ಲಿ ಕಾಲಿಡಿರಿ ! ಹೇಸಿ ಜನಗಳೇ, ಅಯೋಧ್ಯಾಡಳಿತವನ್ನು ಹಾಳುಮಾಡಿದಿರಿ. ದೂತರೇ, ಶೃಂಖಲೆಯನ್ನು ಬಿಗಿಯಿರಿ. ಏನು ನೋಡುವಿರಿ ? ಎಲೇ ಮಂಥರೇ ಮಾರಿಯಾದ ನಿನಗೀರಾಜಕಾರಣವೇ

ತಕ್ಕೆ ಬೇಕಾಗಿತ್ತೇ? ಸತ್ಶೀಲರಾದ ಕೈಕಯಾ ಮಹಾರಾಣಿಯವರ ಬುದ್ಧಿಭ್ರಂಶವನ್ನು ಮಾಡಿ, ರಾಮಚಂದ್ರ ಮಹಾರಾಜರನ್ನು ವನಕ್ಕೆ ಕಳುಹಿಸಿದೆ; ಹಿರೇಮಹಾರಾಜರ ಪ್ರಾಣವನ್ನು ಹರಣ ಮಾಡಿದೆ; ಸಾಕೇತ ಧರ್ಮವಂತ ಪ್ರಜಾಜನಕ್ಕೆ ಪರಿತಾಪವನ್ನುಂಟುಮಾಡಿದೆ. ನಡಿನಡೆ, ಮುಂದಾಗು ಕನಿಷ್ಠ ಮುಂಡೆಯಾದ ನಿನ್ನ ಕ್ಷುಲ್ಲಕ ವಿಚಾರ ಗಳನ್ನು ಕೇಳಿದ್ದಕ್ಕೆ ಸಾಕೇತ ಸಾಮ್ರಾಜ್ಯವೇ ಕೆಳಗೆ ಮೇಲಾಗಿ ಹೋಗು ತ್ತಿರುವದು. ಯಾವ ಮುಹೂರ್ತವಲ್ಲಿ ನೀನೀ ರಾಜಭವನದಲ್ಲಿ ಕಾಲಿಟ್ಟೇ? ಕತ್ತೆಮುಂಡೇ ಮುಖವೆತ್ತಬೇಡ. ನಡೆ ಮುಂದಾಗು ಎಲೋ ಬಾಲಿಶಾ, ನಡೇತೀವ್ರ. (ಶಂಭುಕನ ಕುತ್ತಿಗೆ ಕೈಕೊಟ್ಟು ತಳ್ಳುವನು)

## ಪ್ರವೇಶ - ಕೈಕಯಿ ಮಹಾಲ್

**ಕೈಕಯಾ**–ಮಗುವೇ, ಭರತಾ—

**ಭರತ**-ಬೇಡಾ, ನನ್ನನ್ನು ನೀನು ಮಗುವೆಂದೆನ್ನಬೇಡ. ನಾನು ನಿನ್ನ ಮಗನಲ್ಲ.

**ಕೈಕಯಾ** ಏತಕ್ಕೆ ನನ್ನ ಮೇಲೆ ನೀನಿಷ್ಟೊಂದು ಕೋಪಗೊಳ್ಳುವೆ? ಎಲೋ ಈ ಸಾಕೇತ ಸಾಮ್ರಾಜ್ಯ ಸಿಂಹಾಸನವನ್ನೇ ನಿನ್ನ ಸ್ವಾಧೀನಕ್ಕೆ ತಂದು ಕೊಟ್ಟಿರುವೆನಲ್ಲವೇ!

**ಭರತ**–ಈಗ್ಗೆ ನನ್ನ ವಶಕ್ಕೆ ನೀನು ಕೊಡಬೇಕೆಂದಾಲೋಚಿಸಿದ ಸಿಂಹಾಸ ನವು ಸಾಕೇತ ಸಾಮ್ರಾಜ್ಯದ ಸಿಂಹಾಸನವಲ್ಲ; ಅಮಂಗಲವಾದ ಸ್ಮಶಾನಸಾಮ್ರಾಜ್ಯ ಸಿಂಹಾಸನವು. ನನ್ನ ಪಿತೃವಿನ ಪ್ರಾಣಾಪಹಾರ ವನ್ನು ಮಾಡಿ ಗಳಿಸಿದ ಸಿಂಹಾಸನವು ಪವಿತ್ರ ಸಿಂಹಾಸನವೇ? ಪಿತೃಸಮಾನನಾದಂತಹ ಅಣ್ಣನನ್ನು ಅಡವೀಪಾಲು ಮಾಡಿ ದೊರ

ಕಿಸಿದ ಸಿಂಹಾಸನವು ಪವಿತ್ರವಾದ ಸಿಂಹಾಸನವೇ? ಪ್ರಜಾ ಸಹಾನು ಭೂತಿಯಿಲ್ಲದ ಈ ಸಿಂಹಾಸನವು ಪವಿತ್ರ ಸಿಂಹಾಸನವೇ? ಎಲೆ ರಾಕ್ಷಸೀ, ರಾಜ್ಯತೃಷ್ಣೆಯಿಂದ ಎಂತಹ ನೀಚಕರ್ಮವನ್ನು ಮಾಡಿದೆ? ಅಣ್ಣನನ್ನು ಅಡವೀಪಾಲು ಮಾಡಿ ನನ್ನ ಪರಮಪೂಜ್ಯ ಪಿತೃವಿನ ಪ್ರಾಣವನ್ನು ಕೊಂಡೆಯಾ? ಅಯ್ಯೋ! ದಶರಥ ತಾತಾ, ನಿನ್ನನ್ನೆಲ್ಲಿಕಾಣಲಿ?

**ಭರತ**-

ಚಾಲ್--ಮಾಯಿಸರಸ್ವತೀಶಾರದಾ

ಯಾರದೆನಗಾಧಾರವೋ। ಈ ರಸೆಯೋಳ್ ಪರಿಪರೀ ಸದ್ಬೋಧವನ್ನು
ಒರೆವನುಹಿತವನು ಗೈವರಿಲ್ಲ॥ ಪರಲೋಕವ ಸೇರಿದನು ತಾತನು। ಸೇರಿ
ದವನವಾಗ್ರಜನು ಸುಪಥವಾ। ತೋರುವಗುರುಜನಗಳು ದೂರವಾ। ಗಿರಲು
ಈ ಸಮಯದೇ ॥೧॥

**ಕೈಕಯಾ**-ಎಲೋ ಮೂರ್ಖಾ, ರಾಜಾಧಿರಾಜನೆನಿಸಿಕೊಳ್ಳುವ ಸಂಧಿಯು ಬಂದಿರುವಾಗ್ಗೆ ಗತಗೋಷ್ಠಿಗಳನ್ನು ನೆನೆನೆನೆದು ಸತಿಯರಂತೆ ವಿಲಾಪಿಸುತ್ತಿರುವೆಯಲ್ಲಾ! ನಿನಗೇನೆನ್ನಲಿ?

**ಭರತ**-ಇದಾರ ರಾಜ್ಯವೇ? ಯಾರ ರಾಜ್ಯಕ್ಕೆ ನಾನು ಸ್ವಾಮಿಯೆನಿಸಲೇ? ರಾಮನ ರಾಜ್ಯಕ್ಕೆ ನಾನು ಸ್ವಾಮಿಯಾಗುವದೆಂತು? ಕುಟಿಲತಂತ್ರದಿಂದ ಸಾಮ್ರಾಜ್ಯದ ಸಿಂಹಾಸನವನ್ನು ನೀನು ಕೈವಶಮಾಡಿಕೊಂಡಿರುವದೇನೋ ನಿಜ, ಆದರೆ ಅದರ ಪರಿಣಾಮವೇನಾಯಿತು?–ಸಕಲ ಪ್ರಜಾಜನವು ಕ್ಷೋಭೆಗೊಂಡಿತು; ರಾಜ್ಯದ ಸ್ವಾಮಿಯ ಕೈಯ್ಯಲ್ಲಿ ಪರಟಿಯನ್ನು ಕೊಟ್ಟು ವನಕ್ಕೆ ಕಳುಹಿಸಿದ ನಿನ್ನ ಕ್ರೂರತನಕ್ಕೆ ತಿರಸ್ಕಾರಗೊಂಡು ಸಕಲ ಸಾಕೇತ ನಗರವು ಹಾಳುಬಿದ್ದಿತು. ಪುತ್ರವತ್ಪರಿಪಾಲನೆಮಾಡಿದ ಪ್ರಜಾಜನ ಮನೋಭಂಗವನ್ನು ನೋಡಲಾರದೆ ಎದೆಯೊಡೆದು ಹಿರೀ ಮಹಾರಾಜರು ದಿವಂಗತರಾದರು ಎಲೇ, ವಿಧವೆಯಾದರೂ ಚಿಂತೆಯಿಲ್ಲ, ರಾಜ್ಯವಾಳಬೇಕೆಂದು ಅಪೇಕ್ಷಿಸುವ ನೀನು

ನಿಜವಾಗಿ ಪಿಶಾಚಿಯು. ಎಲೇ ರಾಕ್ಷಸೀ, ರಾಮನು ಸ್ವಾಮಿ ಯಾಗಿದ್ದರೆ ನಿನಗೇನು ಕೊರತೆಯಾಗುತ್ತಿತ್ತೇ?

**ಕೈಕಯಾ**-ನಾನೂ ಮತ್ತು ನನ್ನ ಪರಿವಾರವೂ ಪರರ ಬೊಗಸೆಯಲ್ಲಿ ಜಲ ಪ್ರಾಶನ ಮಾಡಬೇಕಾಗುತ್ತಿತ್ತು

**ಭರತ**-ಈಗ್ಗೆ ಮಾತ್ರ ನೀನು ನಿನ್ನ ಬೊಗಸೆಯಲ್ಲಿಯೇ ನೀರು ಕುಡಿಯುವೆ ಯಲ್ಲವೇ! ಕೃತ್ಯಾ, ಸಿಹ್ಮಾಸನದ ಸ್ವಾಮಿಯಾದ ದಶರಥ ಮಹಾ ರಾಜನ ಮೇಲೆಯೂ ಮತ್ತು ರಾಮಭದ್ರನ ಮೇಲೆಯೂ ಇರುವಂತೆ ಸಾಕೇತ ಪ್ರಜಾಜನರ ಪ್ರೇಮವು ನಿನ್ನ ಮೇಲಿರುವದೆಂದು ಭಾವಿಸು ವೆಯಾ? ಹಾಗಿದ್ದರೆ ಅದು ನಿನ್ನ ಭ್ರಮವು ನೀನು ಪ್ರಜರ ಕಣ್ಣುಗಳಿಗೆ ಮೃತ್ಯು ದೇವತೆಯಂತೆ ಕಾಣುವೆ. ನಿನ್ನ ಪರಿವಾರವು ನನ್ನ ಸಾಕೇತ ಪ್ರಜಾಜನಗಳ ಕಣ್ಣುಗಳಿಗೆ ಭೂತಭೇತಾಳ ಬ್ರಹ್ಮರಾಕ್ಷಸಗಳಂತೆ ಕಾಣುತ್ತಿರುವದು. ಧರ್ಮವಂತ ರಾಜನನ್ನು ಮರಣಕ್ಕೆ ಗುರಿಮಾಡಿ ಪಟ್ಟಬಾಧ್ಯನಾದ ರಾಜಪುತ್ರನನ್ನು ಅಡವೀ ಪಾಲುಮಾಡಿ ಪ್ರಜಾ ಜನರ ಅಂತಃಕರಣಕ್ಕೆ ಬಲವಾದ ಘಾಯವನ್ನು ಮಾಡಿದೆ ಇಂತಹ ಸಂದರ್ಭದಲ್ಲಿ ನಿನ್ನ ವಿಷಯದ ಸಹಾನುಭೂತಿಯು ಪ್ರಜರಲ್ಲುಳಿಯ ಬಹುದೇ ?

**ಕೈಕಯಾ**-ಉಳಿಯದಿದ್ದರಿಲ್ಲ ಆ ಪ್ರಜಾ ಸಹಾನುಭೂತಿಯಿಂದ ನನಗೇ ನಾಗಬೇಕಾಗಿದೆ ? ರಾಜದಂಡ ಸಹಾಯದಿಂದ ಪ್ರಜಾಸಹಾನುಭೂತಿ ಯನ್ನು ಸಹಜವಾಗಿ ಸಂಪಾದಿಸಬಹುದು

**ಭರತ**-ಏನು ? ರಾಜದಂಡ ಸಹಾಯದಿಂದ ಪ್ರಜಾ ಸಹಾನುಭೂತಿಯನ್ನು ಸಂಪಾದಿಸಬೇಕೆಂದೆನ್ನುವೆಯಾ? ಈರಾಜನೀತಿಯನ್ನು ನೀನೆಲ್ಲಿ ಕಲಿತು ಬಂದೇ ಮಾರೀ ? ದಂಡನೀತಿಯಿಂದ ಮನಬಂದಂತೆ ನಡೆಸಿಕೊಳ್ಳಲಿಕ್ಕೆ



ಭರತ- ತವಮುಖವನೋಡೆ ತೆರೆಯಾಗೆ

ಪ್ರಜರು ನಿನ್ನ ಸಾಲಿಗೆ ಕುರಿಗಳಾದರಲ್ಲಾ! ಸಾಕು ಮಾಡು ನಿನ್ನ ಅಮಂಗಲ ಉಪದೇಶವನ್ನು ಕೇಳುವದು ನನ್ನ ಅಪೇಕ್ಷೆಯಿಲ್ಲ ನೀನೂ ನಿನ್ನ ಪರಿವಾರವೂ ಸುಖರೂಪವಾಗಿ ರಾಜ್ಯಭಾರವನ್ನು ಮಾಡಿಕೊಂಡು ಕಾಲಹರಣ ಮಾಡಿರಿ. ನಾನು ನನ್ನ ಪಿತೃಸಮಾನನಾದ ಅಣ್ಣನ ಗೂಡ ವನವಾಸಿಯಾಗುವೆನು. ( ಹೋಗಲುದ್ಯುಕ್ತನಾಗುವನು )

**ಕೈಕಯಾ-** ( ತಡೆದು ) ನಿಲ್ಲು ಭರತಾ.

**ಭರತ-** ಸರ, ತಡೆಯಬೇಡಾ.

ಚಾಲ್–ಏಕಅಜಬಗುಜರಾಧ

ತಪವ ಮುಖಿಸನೋಡೆ ತೆರೆಯಾಗೆತ್ತಿ ಪ್ರದೇ ಮಹಾಪಾತಕಿಯೇ। ತಪಕ್ಕತಿಗೆ ನಾಚಿದನೆಕಲಿಯುಗ ॥ ಮಹಾ ಪಾತಕಿಯೇ। ರವಿಕುಲದಲಿ ಸೇರಿರು ವಮಾನವೀ ॥ ಮಹಾಪಾತಕಿಯೇ ॥ ೧॥

**ಕೈಕಯಾ-** ಮಗುವೇ ಭರತಾ, ಹೀಗೆ ಮಾಡಬೇಡ ನೀನು ವನವನ್ನು ಸೇರಿದರೆ ಈ ರಾಜ್ಯವನ್ನಾರು ಪರಿಪಾಲಿಸಬೇಕು?

**ಭರತ-** ನಿಮ್ಮಂಥ ಪಿಶಾಚಿಗಳು ವಿಮನಸ್ಕ ಪ್ರಜಾಜನಗಳನ್ನು ನಿಮ್ಮಂಥ ಪಿಶಾಚಿಗಳಾಳಬೇಕಲ್ಲದೆ, ನಿಜವಾದ ರಾಜನು ಯಾವ ಕಾಲಕ್ಕೂ ಆಳನು ನನ್ನನ್ನು ತಡೆಯಬೇಡ ರಾಮನಿಲ್ಲದ ಈ ಭೂಮಿಯಲ್ಲಿ ನಿಲ್ಲಲಾರೆನು. ಸರ, ದೂರಾಗು

**ಕೈಕಯಾ-** ಅಯ್ಯೋ, ಈ ರಾಜ್ಯವನ್ನಾರ ಸ್ವಾಧೀನ ಮಾಡಲಿ?

**ಭರತ-** ಅಪೇಕ್ಷೆಪಟ್ಟು ಸಂಪಾದಿಸಿದ ನೀನು ನಿನ್ನ ಸ್ವಾಧೀನದಲ್ಲಿಟ್ಟುಕೋ! ನಿನ್ನ ಪರಿವಾರದ ಮಹತ್ವಾಕಾಂಕ್ಷೆಗಳನ್ನೆಲ್ಲಾ ಪೂರ್ಣಮಾಡಿಕೋ! ಒಂದುಸಮಯ ಹಿರೇಮಹಾರಾಜರಿಗೆ ಕೊಟ್ಟಂತೆದಾಸಿಯಾದ ನಿನಗೂ

ನಿನ್ನ ಪರಿವಾರಕ್ಕೂ ಪ್ರಜಾಜನಗಳು ಸಂತೋಷದಿಂದ ಮರ್ಯಾದೆ
ಯನ್ನು ಕೊಡದಿದ್ದರೆ, ನಿನ್ನ ಸ್ವಾಧೀನದಲ್ಲಿರುವ ರಾಜದಂಡ ಬಲ
ದಿಂದ ಮರ್ಯಾದೆಯನ್ನು ಸಂಪಾದಿಸು. ಅದಕ್ಕೆ ತ್ರಸ್ತರಾಗಿ ಪ್ರಜಾ
ಜನಗಳು ಬಾಯಿ ಬಿಟ್ಟರ ಭಯಂಕರವಾದ ಶಿಕ್ಷೆಗಳನ್ನು ವಿಧಿಸು
ಅಂತೂ ಹೇಗಾದರೂ ಮಾಡಿ ನಿನ್ನ ಸುಖಕ್ಕೂ ನಿನ್ನನುಯಾಯಿಗಳ
ಸುಖಕ್ಕೂ ವ್ಯತ್ಯಯ ಬಾರದಿದ್ದರಾಯಿತು ಹೇಗಾದರೂ ರಾಜನನ್ನು
ನುಂಗಿ ನೀರುಕುಡಿದಿರುವೆ! ನಾಮಧಾರಿಯಾಗಿ ನನ್ನನ್ನು ಪಟ್ಟದ
ಮೇಲೆ ಕುಳ್ಳಿರಿಸಿ ನೀವು ಮಾಡುವತ್ಯಾಚಾರಕ್ಕೆ ನನ್ನನ್ನು ಹೊಣೆ
ಮಾಡುವದೇಕೆ? ಸಾಕೇತ ಸಿಂಹಾಸನಕ್ಕೆ ಪ್ರಜಾಜನಗಳ ಗೋಳು
ಕಟ್ಟಿಕೊಳ್ಳುವದೇ ಬೇಡ. ಅದು ಕೈಕಯಾ ರಾಕ್ಷಸಿಯ ಪಾಲಿಗೂ
ಮತ್ತೂ ಅವಳ ಪರಿವಾರದ ಪಾಲಿಗೂ ಇರಲಿ. ಇನ್ನು ಮೇಲೆ ನಿನ್ನ
ದರ್ಶನವೇ ಬೇಡ ನಾನು ನನ್ನ ಸಾಕೇತ ಸಾಮ್ರಾಜ್ಯದಂತಃಕರಣ
ನಾದ ಶ್ರೀರಾಮಚಂದ್ರನನ್ನು ಸೇರುವೆನು (ಹೊರಟುಹೋಗುವನು)

**ಕೊತವಾಲ-** ಮಹಾರಾಣಿಯವರೇ, ಸಾಕೇತನಗರವನ್ನು ಬಿಟ್ಟು ಹೋಗು
ತ್ತಲಿರುವ ಪ್ರಜಾಜನಗಳನ್ನು ನಿಲ್ಲಿಸಬೇಕೆಂದೆಷ್ಟು ಪ್ರಯತ್ನಮಾಡಿ
ದಾಗ್ಯೂ ವ್ಯರ್ಥವಾಯಿತು ಅವರು ತಮ್ಮ ಮನೆಮಾರು ಸ್ವಾಸ್ತಿವೃತ್ತಿ
ಗಳ ಪರವಿಲ್ಲದೆ ಹೊರಟು ಹೋಗುತ್ತಲಿದ್ದಾರೆ ಅರ್ಧ ಜನಗಳು
ಹೀಗೆಯೇ ಹೋದರು; ಉಳಿದ ಜನಗಳು ಮೃತಮಹಾರಾಜರ ಸೂತ
ಕವನ್ನು ಪಾಲಿಸುತ್ತಿರುವರಂತೆ ಪೇಟೆಯಲ್ಲಿ ಎಲ್ಲಾ ಅಂಗಡಿಗಳ ಬಾಕಿಲ
ವನ್ನಿಕ್ಕಿಕೊಂಡು ಕಣ್ಣೀರು ಸುರಿಸುತ್ತ ಕುಳಿತುಬಿಟ್ಟಿದ್ದಾರೆ. ಅಂಗಡಿ
ಗಳನ್ನು ತೆರೆದು ಮೊದಲಿನಂತೆ ವ್ಯವಹಾರವನ್ನು ಮಾಡಿಸುವದರ ಸಲು
ವಾಗಿ ಕೆಲಕೆಲವೆಡೆಯಲ್ಲಿ ದಂಡನೀತಿಯನ್ನು ಕೂಡಾ ಉಪಯೋಗಿಸಿ
ದೆನು. ಅದರದು ನಿಷ್ಫಲವಾಯಿತು.





**ಕೈಕಯಾ** - ಅಯ್ಯೋ ಕೆಟ್ಟೆನು ಕೆಟ್ಟೆನು.

**ಕೈಕಯಾ-** ನಿಜವಾಗಿ ನನ್ನ ಮೂರ್ಖತನದಿಂದ ಸಾಮ್ರಾಜ್ಯದ ಮೇಲಿದೊಂದು ಉತ್ಪಾತವು ಜರುಗಿತು. ಮುಂದೇನುಮಾಡಲಿ? ಹೇಗಾದರೆ ಈ ಸಾಕೇತ ಸಾಮ್ರಾಜ್ಯದಲ್ಲಿ ನೆಮ್ಮದಿಯುಂಟಾದೀತು? ಅಯ್ಯೋ! ಯಾಕಾದರೆ ನಾನು ಮಂಥರಯಂಥ ಕ್ಷುಲ್ಲಕ ಸೇವಕಿಯ ಮಾತನ್ನು ಕೇಳಿದೆನು? ಏನುಮಾಡಲಿ, ಸಾಮ್ರಾಜ್ಯವು ಹಾಳಾಗುತ್ತಿರುವದೆಂದು ಗೋಳಾಡಲೇ, ಪುತ್ರನು ಅಡವೀಪಾಲಾದನೆಂದು ಗೋಳಾಡಲೇ ಅಥವಾ ನನ್ನ ಸೌಭಾಗ್ಯನಿಧಿಯನ್ನು ಮಣ್ಣುಪಾಲುಮಾಡಿದೆನೆಂದು ಗೋಳಾಡಲೇ? ಏನುಮಾಡಲಿ? ಅಯ್ಯೋ ಕೆಟ್ಟೆನು ಕೆಟ್ಟೆನು.

**ಕೊತವಾಲ-** ಅಮ್ಮನವರೇ, ಮಾತು ಮಿಂಚಿ ಹೋಗಿದೆ; ಚಿಂತಿಸುವದರಿಂದೇನು ಫಲ ಈಗಿನ ಸಂದರ್ಭದಲ್ಲಿ ಧೀಮಂತರಾದ ಸುಮಂತರಾಯರನ್ನೂ ಮತ್ತು ಸದ್ಗುರುಗಳಾದ ವಶಿಷ್ಠರನ್ನೂ ಕರೆಸಿಕೊಂಡು ಅವರ ಹೇಳಿಕೆಯಂತೆ ವರ್ತಿಸಿದರೇನೇ ಕೆಲಮಟ್ಟಿಗೆ ಸಮಾಧಾನವು ನೆಲೆಗೊಳ್ಳಬಹುದೆಂದು ತೋರುತ್ತೆ

**ಕೈಕಯಾ-** ಹಾಗಾದರೆ ತೀವ್ರವೇ ನೀವಾ ಉಭಯ ಮಹಾನುಭಾವರ ಕಡೆಗೆ ಹೋಗಿರಿ ಮತ್ತು

ಚಾಲ್–ಆತ್ಮಲಿಂಗವಾದಹಿಸಿದೆ

ಎನ್ನಬಿನ್ನಪವಾಲಿಸುಹಿಸಿ | ಸನ್ನುತಾತ್ಮರಾ ಸನ್ನಿಧಿಯೊಳು ॥ ಭೂರಿ ವ್ಯಸನ | ಬಡುವಳೆಂದು | ತಾನುಗೈದಾ | ಕ್ರೂರಕೃತಿಗೆ | ಕ್ಷಮಿಸೆನ್ನಯಾ | ಅಪರಾಧವಾ | ಗಮಿಸುವದೀ ಸಾಕೇತಪುರಕೆ ॥೧॥

# ಭರತ ಪ್ರವೇಶ.

**ಭರತ-** ಭೈರವಿ-ತ್ರಿವಟ

ತೋರಿಸಿರಾರಾದರು ಜಾಗ್ರತೆ ರಘುರಾಮರಾಜಚರಣಾ | ಸುಖದಾಮ ರಾಮಚರಣಾ ॥ ಅರವಿಂದಾಕ್ಷನ ಚರಣಸರೋಜಕೆ | ತ್ವರಿತದೆರಗಿಕ್ಷಮೆಯ

ನ್ನು ಕೋರುವೇ | ದುರುಳೆಯುಗೈದಪರಾಧಕೆ ಅನಂ | ತರದಾತನನಾಂ ಮರಳಿ
ಕರೆತರುವೆ ॥೧॥

**ಸುಮಂತ**-ಭರತಮಹಾರಾಜರೇ, ದಯಮಾಡಿ ಹಿಂತಿರುಗಿರಿ. ತಾವೇ ಪಟ್ಟ ವನ್ನೇರಿ ರಾಜ್ಯಭಾರವನ್ನು ವಹಿಸಬೇಕೆಂದು ರಾಮಭದ್ರ ಮಹಾರಾಜ ರಾಜ್ಞಾಪಿಸಿರುವರು.

**ಭರತ**-ಸುಮಂತರಾಯನೇ, ಸಾಕೇತ ರಾಜ್ಯವು ಅಣ್ಣನ ಸಲುವಾಗಿರುವದು; ನನ್ನ ಸಲುವಾಗಲ್ಲ. ಅಲ್ಲದೆ ನಾನು ಪಟ್ಟಕ್ಕೆ ಬಾಧ್ಯನೇ ? ರಾಮಭದ್ರ ಮಹಾರಾಜರು ಅರಣ್ಯದಲ್ಲಿ ಸಂಚರಿಸುತ್ತಿರುವಾಗ್ಗೆ ಅನಧಿಕಾರಿಯಾದ ನಾನವರ ಸ್ಥಲದಲ್ಲಿ ಕುಳಿತುಕೊಂಡು ಸಂಭ್ರಮದಿಂದ ರಾಜ್ಯಭಾರ ವನ್ನು ಮಾಡಲೋ ! ಸುಮಂತರಾಯನೇ, ನಾಚಿಕೆಯುಳ್ಳ ಮಾನವ ನಿಂದ ಮಾತ್ರ ಇಂಥ ಕೆಲಸವಾಗಲಿಕ್ಕಿಲ್ಲ ಏನೋ ಲೋಕಲಜ್ಜೆಯನ್ನು ತಲೆಗೆ ಸುತ್ತಿದವನಾಗಿದ್ದರೆ ಮಾತ್ರ ಅವನಿಂದಿಂಥ ಕೆಲಸವಾಗಬಹುದು ಆದಕಾರಣ ನಾನು ಅಣ್ಣನಗೂಡ ವನದಲ್ಲಿದ್ದು ಆತನ ದುಃಖಕ್ಕೆ ಭಾಗಿಯಾಗುವೆನು.

**ಸುಮಂತ**-ಮಹಾರಾಜರೇ, ರಾಜಪುರುಷರೆಲ್ಲರೂ ವನವಾಸಿಗಳಾದಮೇಲೆ ಅನಾಯಕ ರಾಜ್ಯವಾಗುವದಲ್ಲವೇ ?

**ಭರತ**-ಸುಮಂತರೇ, ಐಶ್ವರ್ಯವನ್ನು ಭೋಗಿಸುವ ಪಿಶಾಚ ಮಹತ್ವಾ ಕಾಂಕ್ಷೆಯಿಂದ ಕೈಕಯೆಯು ಪರಿವಾರಗಣದ ಬೋಧದಿಂದ ರಾಜ್ಯ ವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿರುವಳಲ್ಲವೇ ? ತೀರಲಿ-ಆ ಪಿಶಾಚಿಯ ಮಹತ್ವಾಕಾಂಕ್ಷೆಯಾದರೂ ತೀರಲಿ.

**ಸುಮಂತ**-ಅಷ್ಟರಲ್ಲಿ ರಾಜ್ಯದ ಪರಿಣಾಮವೇನಾದೀತು ?

**ಭರತ**-ಅದಕ್ಕೆ ಉಪಾಯವಿಲ್ಲ ಸುಮಂತರಾಯನೇ, ರಾಜಾಧಿರಾಜ ದಶರಥ

ಮಹಾರಾಯರ ಮಕ್ಕಳಲ್ಲಿ ಒಬ್ಬನು ರಾಜನಾಗಿ ಮತ್ತೊಬ್ಬನು ರಂಕ ನಾಗಬೇಕೇ ! ಅದೇನುಕಾರಣ ? ಒಂದು ಸಮಯ ತಾನು ಸಂಭ್ರಮ ವನ್ನು ಸುರಿಯುವದಕ್ಕಾಗಿ ಕೈಕಯಿಯು ರಾಜ್ಯಪದವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡರೂ ತೆಗೆದುಕೊಳ್ಳಲಿ. ಆದರೆ ರಾಜ್ಯದ ಸ್ವಾಮಿಯಾದ ರಾಮಭದ್ರನನ್ನು ಅಡವೀಪಾಲು ಮಾಡಿದ ಕಾರಣ ವೇನು ? ಹದಿನಾಲ್ಕು ವರ್ಷಗಳ ತನಕ ಕಠಿಣವಾದ ಕಾಂತಾರವಾಸ ದಲ್ಲಿರುವ ಶಿಕ್ಷೆಯನ್ನೇತಕ್ಕೆ ವಿಧಿಸುವದು ? ಆತನು ನಗರದಲ್ಲಿದ್ದರೆ ತನ್ನ ಸುಖಕ್ಕೇನು ವ್ಯತ್ಯಯವಾಗುತ್ತಿತ್ತು ? ಅರ್ಥಾತ್ ದಾರಿದ್ರ್ಯಾವಸ್ಥೆ ಯಲ್ಲಿದ್ದು ಅವನು ಸರ್ವಸ್ವೀ ಅಧಃಪಾತವನ್ನು ಹೊಂದಿ ತಿರುಗಿ ರಾಜ್ಯ ಪಾಳುವದಕ್ಕೆ ಅಯೋಗ್ಯನಾಗಬೇಕೆಂತಲೇ ಅವಳು ಹೀಗೆ ಮಾಡಿರುವ ಳಲ್ಲವೇ ? ಧೂ ! ನಮ್ಮ ವಂಶದಲ್ಲಿ ಈ ಕಲಿಯು ಎತ್ತಿಂದ ಪ್ರವೇಶ ವಾಯಿತೋ, ಏನೋ ? ಬಹಿರಂಗದಲ್ಲೂ ಅಂತರಂಗದಲ್ಲೂ ಕೇವಲ ಪರಿಶುದ್ಧರೆನಿಸಿಕೊಳ್ಳುತ್ತಲಿರುವ ರವಿಕುಲವು ಈ ವಿಧಿಮಾಯಾಕೃತಿ ಯಿಂದ ಕಲಂಕಿತವಾಯಿತು

**ಸುಮಂತ**-ಮಹಾರಾಜರೇ, ತಮ್ಮ ವಿಚಾರಗಳು ಕೇವಲ ಸತ್ಯವಾದವುಗಳು. ಆದರೆ ಆಗಬಾರದ್ದಾಗಿ ಹೋಗಿದೆ ಇದರಲ್ಲಿಯೇ ಯಾವದಾದರೊಂದು ತರುಣೋಪಾಯವನ್ನು ಹುಡುಕಬೇಕಲ್ಲವೇ ?

**ಭರತ**–ಇದನ್ನು ನೀವೇ ಯೋಚಿಸಿರಿ ಅಲ್ಲದೆ ಇನ್ನು ಮೇಲೆ ನೀವಾದರೂ ನನ್ನ ನಿರ್ಧಾರವನ್ನು ತಪ್ಪಿಸುವ ವೃಥಾ ಖಟಾಟೋಪವನ್ನು ಮಾಡ ಬೇಡಿ ಏನೋ ಬಂಧುಗಳಾದ ನಾವು ಸುಖರೂಪವಾಗಿ ಹದಿನಾಲ್ಕು ವರ್ಷಗಳ ಶಿಕ್ಷೆಯನ್ನನುಭೋಗಿಸಿ ಬಂದೆವೆಂದರೆ ನೀವು ನಿಮ್ಮ ಮನೋವಾಂಛಿತಗಳನ್ನೆಲ್ಲಾ ಪೂರೈಸಿಕೊಳ್ಳುವಿರಂತೆ ಹೋಗಿಹೋಗಿ

ನಿಲ್ಲಬೇಡಿ ಮತ್ತೂ ಶೋಕಾಕುಲರಾಗಬೇಡಿ ನನಗೆ ನಿಲ್ಲಲಿಕ್ಕವ ಕಾಶವಿಲ್ಲ

ಚಾಲ್-ಲಾವಿಲೀಧಂಡಉಟ

ಸೇರುವೆರಾಘವನಾ | ಸನ್ನಿಧಿಯಾ ॥ ಸ್ವರದೇಸುಮಂತರಾಯಾ | ಸದ
ಯಾರ್ಣವನಾ | ಪಾದಸೇವೆಯಾ | ಸತತಮಾಡಿಸವೆಸುವೆನೀಕಾಯಾ | ಆ ದಶರಥ
ತಾತನತರುವಾಯಾ | ಈ ಧರಿತ್ರಿಯೊಳಾತನೆ ಪಿರಿಯಾ ॥೧॥ (ಹೋಗುವರು)

**ಸುಮಂತ**–ಸಾಕೇತಸಾಮ್ರಾಜ್ಯವ ಮೇಲಿದೊಂದುತ್ಪಾತವೇಸರಿ ಮಹಾ ರಾಜರು ದಿವಂಗತರಾದರು. ರಾಜ್ಯದ ಸ್ವಾಮಿಗಳಾದ ರಾಜಪುತ್ರರು ಅಡವೀಪಾಲಾದರು ಪ್ರಜಾಜನಗಳಲ್ಲಿ ಹಲವರು ದೇಶತ್ಯಾಗಮಾಡಿ ದರು. ಉಳಿದವರು ಹತಾಶರಾಗಿ ಉದಾಸೀನವೃತ್ತಿಯಲ್ಲಿರುವರು. ಇಂತಹ ಸಂದರ್ಭದಲ್ಲಿ ಯಾವನಾದರೋರ್ವ ಮಹತ್ವಾಕಾಂಕ್ಷಿ ಯಾದ ಪರರಾಜನು ಈ ತಾಳಗೆಟ್ಟ ಸಾಕೇತ ಸಾಮ್ರಾಜ್ಯದ ಮೇಲೆ ಸಾಗಿ ಬಂದರೆ ನಿಜವಾಗಿವರ ಪರಿಣಾಮವು ಒಳಿತಾಗಲಾರದು ಇವಲ್ಲ ಸಂಗತಿ ಗಳು ಆ ಕೈಕಯೆಯ ಸ್ತ್ರೀಬುದ್ಧಿಗೆ ಹೇಗೆ ಗೊತ್ತಾದಾವು ? ಉನ್ಮತ್ತ ಪರಿವಾರಗಣದ ದುರ್ಬೋಧವನ್ನು ಕೇಳಿ ಏನೋ ಒಂದು ಮಾಡಿ ಬಿಟ್ಟಳು.

**ಕೊತವಾಲ**-ಸುಮಂತಮಹಾರಾಜರೇ, ಕೈಕಯಾದೇವಿಯವರು ತಮ್ಮನ್ನು ಕರೆದುಕೊಂಡು ಬರುವದಕ್ಕಾಗಿ ಆಜ್ಞಾಪಿಸಿದ್ದಾರೆ.

**ಸುಮಂತ**-ಕರೆದುಕೊಂಡು ಬರುವದಕ್ಕೆ ಆಜ್ಞಾಪಿಸಿರುವರೋ, ಏನು ಹಿಡಿದು ಕೊಂಡು ಬರುವದಕ್ಕೆ ಆಜ್ಞಾಪಿಸಿರುವರೋ ?

**ಕೊತವಾಲ**-ಅಯ್ಯೊ ಹಾಗೇನುಭಾವಿಸುವಿರಿ ? ಕರೆದುಕೊಂಡು ಬರುವದ ಕ್ಕಾಗಿ ಹೇಳಿದ್ದಾರೆ.

**ಸುಮಂತ**– ಚಾಲ್-ಧನಿಕಸುತಾಕಾಂತಾ

ಗರಲಸ್ಪೃಹಾಕಾಂತಾ | ಕ್ರೂರನಾಗಿಣೀ ॥ ಪರಪೋಷಕರೂಪತಾಳಿ |
ಘೋರಧಾಸಿಕೀ ॥ ಸಾಧು ಬಂ ಸ್ವಾರ್ಥಪನ್ನ | ಅಘಪಾಥನಾರಿಯಪಳು |
ಸಾಕೇತದರಾಜ್ಯಭವನ | ದಹಿಸುತಿರ್ಪಳು ॥೧॥

ಯಾರು ಬಲ್ಲರು ? ಪುತ್ರನನ್ನು ಅಡವೀಪಾಲುಮಾಡಿ ಪತಿಯನ್ನು ಕೊಂದ ಘನವಂತಳಿಗೆ ಯಃಕಚಿತ ಸುಮಂತನನ್ನು ಹಿಡಿದು ತರಿಸುವದು ಅಸಾಧ್ಯವಾದೀತೆ ?

**ಕೊತವಾಲ**-ಕೃತಕರ್ಮದ ಪಶ್ಚಾತ್ತಾಪವಾದುದರಿಂದಲೇ ಅವರಿಗೆ ದಿಕ್ಕು ತಪ್ಪಿ ಹೋಗಿದೆ, ಅಥವ ಸುಮಂತರಾಯರೇ, ಕ್ಷುಲ್ಲಕಮತಿಯ ಜನಗಳ ಕಡೆಗೆ ತಮ್ಮಂಥವರು ಚಿತ್ತವನ್ನೀಯಲೇ ಬಾರದೆಂದು ಈ ಬಡ ಸೇವಕನು ವಿಜ್ಞಾಪಿಸಿಕೊಳ್ಳುವನು ರಾಜ ಮತ್ತು ಪ್ರಜಾ-ಇವರೀರ್ವರ ಸೇವೆಯನ್ನು ಪರಮ ವಿಶ್ವಾಸದಿಂದ ಮಾಡತಕ್ಕ ತಮ್ಮಂಥ ಮಹಾನುಭಾವರು ಈಗಿನ ಇಕ್ಕಟ್ಟಿನ ಪರಿಸ್ಥಿತಿಯಲ್ಲ ಮುಂದರಿವರೇನೇ ಸಾಕೇತ ಸಾಮ್ರಾಜ್ಯದ ಚಿರಸ್ಥಾಯಿತ್ವವು ಆದಕಾರಣ ದಯಮಾಡಿ ಕರ್ತವ್ಯದ ಸಲುವಾಗಿ ಮಾನಸೀಕತೆಯನ್ನು ಮಾಡಬಾರದೆಂದು ಬೇಡಿಕೊಳ್ಳುವೆನು

**ಸುಮಂತ**–ಕೊತವಾಲರೇ, ದಶರಥ ಮಹಾರಾಜರ ಮೃತ್ಯುವಿನಿಂದಲೂ, ಷಡ್ಗುಣೈಶ್ವರ್ಯ ಸಂಪನ್ನರಾದ ಯುವರಾಜ ರಾಮಭದ್ರ ಮಹಾರಾಜರ ವಿಯೋಗದಿಂದಲೂ, ಅವರೊಡನೆಯೇ ಕ್ಷುಲ್ಲಕ ಜನರ ನೀಚಕೃತಿಗೆ ಪರಮಾವಧಿಯ ಹೇಸಿಗೆ ಹುಟ್ಟಿ ತೀವ್ರ ವಿರಕ್ತಿಯಿಂದ ಅಣ್ಣಾನೊಡನೆ ವನವಾಸಿಗಳಾಗುವದಕ್ಕೆ ಹೊರಟುಹೋದ ಮೂರ್ತಿಮಂತ ಬಂಧುಪ್ರೇಮಿಗಳಾದ ಭರತ ಮಹಾರಾಜರ ವಿಯೋಗದಿಂದಲೂ ವಿಪರೀತ ವ್ಯಥೆಪಟ್ಟು ಅಹೋರಾತ್ರಿಯಲ್ಲಿಯೂ ಕಣ್ಣೀರು ಸುರಿಸುವ

ಪ್ರಜಾಜನಗಳ ಸಮಾಧಾನವನ್ನು ಹೇಗೆಮಾಡಲಿ ? ಬೇಡ, ತಿರುಗಿ ನಾಕೇತಪಟ್ಟಣದಲ್ಲಿ ಕಾಲಿಡುವುದೇ ಬೇಡ ಆ ಸಾಮ್ರಾಜ್ಯದಾನಂದ ರವಿ ಅಸ್ತಾಚಲವನ್ನೈದಿದನು. ಶೋಕದಕಗ್ಗತ್ತಲೆಯು ಮುಸುಕಿ ಹೋಗಿದೆ. ಅಂತಹ ಸ್ಥಳದಲ್ಲಿ ನಾನು ಬಂದು ಮಾಡುವದೇನು? ಹೋಗಿರಿ, ಬರಲಿಕ್ಕೆ ಮಾರ್ಗವಿಲ್ಲ.

**ಕೊತವಾಲ**-ಸುಮಂತ ಮಹಾರಾಜರೇ, ತಾವೊಬ್ಬರು ಹೋಗಿಬಿಟ್ಟರೆ ಈ ಸಾಕೇತಸಾಮ್ರಾಜ್ಯದ ರಾಜ್ಯಚಾಲಕತ್ವದ ಮತಿಯು ನಿಶ್ಶೇಷವಾಗಿ ಹೋಗಿಬಿಟ್ಟಂತಾಗುವುದು ದಯಮಾಡಿ ಹಾಗೆ ಮಾಡಬೇಡಿ ರಾಜ ನಿಷ್ಠರೂ ಮತ್ತು ಪ್ರಜಾಹಿತದಕ್ಷರಾದ ತಾವು ದಯಮಾಡಿ ಈಗಿನ ಕಠಿಣವಾದ ಪರಿಸ್ಥಿತಿಯಲ್ಲಿ ನಮ್ಮೆಲ್ಲರ ಕೈಬಿಡಬೇಡಿ ಕೈಕಯಾ ದೇವಿ ಯವರಿಗೆ ತ್ರಾಹಿತ್ರಾಹಿಯಾಗಿದೆ. ಕುಟಿಲ ನೀತಿಯನ್ನು ಬೋಧಿಸಿದ ಮಂಥರಾ ಮೊದಲಾದ ಅವರ ಪರಿವಾರಗಣವು ಎತ್ತೋ ಅಡಗಿ ಹೋಗಿದೆ. ಮಹಾಸ್ವಾಮೀ, ಪರಮೇಶ್ವರನು ಸತ್ಯಕ್ಕೆ ಜಯವನ್ನು ಕೊಟ್ಟಾನಲ್ಲದೆ ಅಸತ್ಯಕ್ಕೆ ಕೊಡುವನೇ ?

**ಸುಮಂತ**-ಕೊತವಾಲರೇ, ನಡೆಯಿರಿ ಮಾಡತಕದ್ದೇನು ? ಅಖಿಲ ಪ್ರಜಾ ಜನರ ಪ್ರೇಮಕೇಂದ್ರನಾದ ರಾಜನಿಲ್ಲದ ಶೂನ್ಯಸಿಂಹಾಸನದ ಸೇವೆ ಯನ್ನು ಎತ್ತಾದರೂ ಹೊತ್ತುಹಾಕುತ್ತಾ ವಿಧವೆಯರ ಬಾಳುವೆಯಂತೆ ಕಾಲಹರಣಮಾಡುವಾ.

ಭೈರವಿ-ಝಂಪೆತಾಳ

ಬೇಸರಾಯಿತು ವಸುಧಿವಾಸವೂ ಕೀಳಸಹವಾಸವೂ | ಮನುಜತನುವೀ ಸಮಯದೆನಗೇ ॥ ನಿಸ್ಸಾರಸಂಸಾರ | ದೆ ಷಡರಿಬಾಜಾರ | ಕಡುದುಃಖದ ಪಸಾರ | ಮಲ್ಲದಿನ್ನೇನೂ ॥೧॥

**ಚತುರ್ಥಾಂಕ ಸಮಾಪ್ತ.**

# ಪಂಚಮಾಂಕ.



( ಜಂಗಲ್ ರಸ್ತಾ— ಗುಹಕನ ಪ್ರವೇಶ )

**ಗುಹಕ**-ಓಯ್ ನರಸಾ, ಬೇಗಬಾ ಅವ್ವಾ

**ನರಸಾ**-ಬಂದೆ ಅಪ್ಪಯ್ಯಾ ಏನಪ್ಪಣೆ ?

**ಗುಹಕ**-ಎಲಾ ಮಗೂ, ಹೊಟ್ಟೆಯಲ್ಲಿ ನಾಮವನ್ನೇ ಇಟ್ಟುಕೊಂಡಿಲ್ಲವಲ್ಲಾ.

**ನರಸಾ**-ಅಷ್ಟರಲ್ಲಿಯೇ ತಾವು ಕರೆದಿರಂತೇ ಓಡಿಬಂದೆನು ಇದೋ, ಗೋಪೀ ಚಂದನವು ಕೂಡಾ ಕೈಯಲ್ಲಿದೆ ನೋಡಿ

**ಗುಹಕ**-ಇಟ್ಟುಕೋ ತೀವ್ರ ನದೀದಂಡೆಗೆ ಹೋಗುವಾ, ಪ್ರವಾಸಿಕರು ಕಾಯ್ದಿದ್ದಾರು ಅದಿರಲಿ ಹುಟ್ಟಿನ ಕೈರೂಢಿಯನ್ನು ಮಾಡಿಕೊಂಡೆಯಾ?

**ನರಸ**-ನಿಮಗಿಂತಲೂ ಚನ್ನಾಗಿ ಮಾಡಿಕೊಂಡಿದ್ದೇನೆ ನೋಡಿ ಬೆಳಗಿನಿಂದ ಸಾಯಂಕಾಲದವರೆಗೂ ಒಂದೇ ಸವನೇ ಹುಟ್ಟು ನಡೆಸಿದರೂ ಕೈಗಳು ಸೋಲುವದಿಲ್ಲ

**ಗುಹಕ**-ಅಷ್ಟು ಅಭ್ಯಾಸವನ್ನು ಮಾಡಿಕೊಂಡೆಯಾ ?

**ನರಸ**-ಅದರಲ್ಲಾ ಪದವನ್ನು ನೀವು ಯಾವಾಗಲೂ ಹೇಳುವಿರಲ್ಲಾ ?

**ಗುಹಕ**-ಯಾವದೋ ? ವಶಿಷ್ಟಜ್ಜಯ್ಯನವರು ಹೇಳಿಕೊಟ್ಟದ್ದೇನೋ ?

**ನರಸ**-ಹಾಂ ! ತಾತಯ್ಯಾ, ಆ ಪದವನ್ನು ಹೇಳುತ್ತ ಹುಟ್ಟು ಕೈಯ್ಯಲ್ಲಿ ಹಿಡಿದರಂತೂ ಮೈಯ್ಯಲ್ಲಿ ಮಾದೇವರ ಸಾಮರ್ಥ್ಯಬಂದಂತಾಗುತ್ತೆ ನೋಡಿ.

**ಗುಹಕ**-ಮಗೂ ನರಸಯ್ಯಾ, ಆ ಪದದ ಮಹಿಮೆಯೇ ಹಾಗುಂಟು.

**ನರಸ**-ತಾತಯ್ಯಾ, ಆ ಪದದೊಳಗಿನ ರಾಮಯ್ಯನೂ ಮತ್ತೂ ನನ್ನ ಹೊಟ್ಟೆಯ ಮೇಲಿದ್ದ ನಾಮದ ರಾಮಯ್ಯನೂ ಇಬ್ಬರೂ ಒಂದೇ ಏನು?

**ಗುಹಕ**-ಅಹುದಹುದು ಆ ಪದದಲ್ಲಿಯ ರಾಮಯ್ಯನೂ ನಿನ್ನ ಹೊಟ್ಟೆಯಲ್ಲಿಟ್ಟ ನಾಮದೊಳಗಣ ರಾಮಯ್ಯನೂ, ಮತ್ತೂ ಮೊನ್ನೆಮೊನ್ನೆ ನಮ್ಮ ರಾಜ್ಯದ ಪಟ್ಟನೇರಿದ ರಾಮಯ್ಯನೂ ಮೂವರೂ ಒಬ್ಬಾತನೇ

**ನರಸ**-ಮತ್ತೂ ನಿಮ್ಮ ಹೊಟ್ಟೆಯಲ್ಲಿದ್ದಾತನು ?

**ಗುಹಕ**-ಆತನು ಸಹಾ ಅದರಲ್ಲಿಯೇ ಬಂದನು

**ನರಸ**-ಏನಯ್ಯಾ ಇದು ! ಒಬ್ಬನೇ ಒಬ್ಬಾತನು ಮೂರು ನಾಲ್ಕು ಸ್ಥಳದಲ್ಲಿ ಹೇಗಿರುವನು ?

**ಗುಹಕ**-ಮಗೂ, ಆತನು ಜೀವನು ಬರೇ ಮೂರು ನಾಲ್ಕು ಸ್ಥಳಗಳಲ್ಲೇಕೆ ? ಎಲ್ಲಾ ಕಡೆಯಲ್ಲಿಯೂ ತುಂಬಿರುವನೆಂದು ವಶಿಷ್ಠದೇವರು ಹೇಳಿದ್ದಾರ ಅಂತೇ ಆತನ ನಾಮಸ್ಮರಣೆಯನ್ನು ಯಾವಾಗಲೂ ಮಾಡಬೇಕು. ಆತನ ಹೆಸರಿನಲ್ಲ ಅಮೃತವಿರುವವಂತೆ-ಅಮೃತ !

**ನರಸ**-ಅಹುದು ನೋಡು ತಾತಯ್ಯಾ, ಈ ನಾಮವಲ್ಲಮೃತವಿದ್ದದ್ದೇ ನಿಜ ! ಯಾಕಂವರೇ ಹೊಟ್ಟೆಯಮೇಲೆ ದೊಡ್ಡದಾದೊಂದು ನಾಮವನ್ನಿಟ್ಟು ಬಿಟ್ಟರೆ ತೀರಿತು-ಉಂಡಂತಾಗಿ ಹಸಿವೆಯೇ ಆಗುವದಿಲ್ಲ, ನೋಡಿ.

**ಗುಹಕ**-ನಿಜವಾದ ಸಂಗತಿಯನ್ನು ಹೇಳಿದೆ ಇರಲಿ ನನ್ನಗೂಡ ಆ ಪದವನ್ನು ಹೇಳುತ್ತಾ ಹುಟ್ಟು ನಡೆಸು, ನೋಡುವಾ. ಹೀಗ್ಹೀಗೆ ರೂಢಿಯನ್ನು ಮಾಡಿಕೊಂಡಿರುವಿ

**ಇಬ್ಬರೂ**–( ಹುಟ್ಟು ನಡೆಸುತ್ತ )

ಚಾಲ್-ಭಳಿರೆಭಾಪು ಸೂಗೂರಯ್ಯಾ

ಸಾಗರಶಾಯೀರಾಮಯ್ಯಾ | ವರಭೋಗೀಶತಲ್ಪ ರಾಮಯ್ಯಾ ॥ ಸಾಗ
ರಸುತೆ ಯಾವಾಗಲೂ ನಿನ್ನ ಸೇವೆಗೆಸಿದ್ಧಳಂತೆ ॥ ಅವತಾರದರಾಮಯ್ಯಾ
ನೀಸುಧಾರಣೆಯೊಳು ಬಂದೆರಾಮಯ್ಯಾ | ಅರಘುವಂಶದಿ ಏಳನೆಯ ಭೂ |
ಭಾರವನಿಳಿಸಲು ರಾಮಯ್ಯಾ ॥ ಹಸಿವುಹಿಂಗುವದು ರಾಮಯ್ಯಾ | ಪುಸಿಯು
ಲ್ಲ ನಿನ್ನ ನಾಮವನುಸುರಲು ದಶರಥನಂದನರಾಮಯ್ಯಾ ॥೧॥

**ಗುಹಕ**-ಪರವಿಲ್ಲ ಪರವಿಲ್ಲ, ಕೈಗಳು ಸರಳಾಗಿವೆ ನನ್ನ ಮುಪ್ಪಿನಕಾಲದ ಚಿಂತೆಯು ದೂರವಾಯಿತು ನಡೇ, ನದೀ ತಟಾಕಕ್ಕೆ ಹೋಗುವಾ ( ಹೋಗುವರು )

# ಪ್ರವೇಶ - ರಾಮ ಲಕ್ಷ್ಮಣ ಸೀತಾ

**ರಾಮ**–

ಚಾಲ್-ಶ್ರೀವಾಸುದೇವಾಪೊರೆದೇವದೇವ

ವನವಾಸವೇನೂ ಪುರವಾಸವೇನೂ | ಘನಸುಖದುಃಖಗಳಿರುತಿಹವೇನೂ
ಮನವದು ಕಲ್ಪಿಸುವದು ಸುಖದುಃಖಾ । ಇನಿತಿರಲೂ ಭ್ರಮಗೊಳ್ಳುವದೇನೂ ॥

**ಲಕ್ಷ್ಮಣ**–ಆದಾಗ್ಯೂ ಅಣ್ಣನೇ, ಈ ಸೀತಾಮಾತೆಯ ಕಷ್ಟಗಳನ್ನು ನೋಡಲಾರೆನು. ನೋಡಿದಿರಾ ? ಇವರ ನವಕೋಮಲ ಚರಣಗಳಿಂದ ರಕ್ತವು ಹರಿಯುತ್ತಲಿದೆ.

**ಸೀತಾ**-ಮೈದುನನೇ, ಅತಿರೇಕವಾದ ವರ್ಣನೆಯನ್ನು ಮಾಡಿದೆ (ಕಾಲು ಒರೆಸಿಕೊಂಡು)

ಚಾಲ್-ಅವಚಿತಗೇಲೇಕಿಂಕರ

ಹಿತಕರವಾಗಿರುವದನಗೆ ವನವಿದು। ಪತಿಯುಸಮಾಗಮದಿರುವದರಿಂದೇ

ಘನದುಃಖಿತಳಾಗುತಿರ್ದನಾಸು | ಮನೆಯೊಳಿರಿಸಿ ವಿಕಾಂಗಿಗಳಾಗಿ। ವನಕೆ
ಸ್ವಾಮಿಯು ಬರುತಲಿರ್ದರೇ | ವಿನಯಶೀಲಪ್ಮೈದುನನೆ ಸಹಜದೀ ॥೧॥

**ರಾಮ**-ನೋಡಿದೆಯಾ ಲಕ್ಷ್ಮಣನೇ? ತಾನು ದುಃಖವನ್ನು ತೋರಿಸಿಕೊಂಡರೆ ಕಾನನದ ಕಷ್ಟದಲ್ಲಿ ಕಾಲಕಳೆಯುವ ನಮಗೆ ಮತ್ತಷ್ಟು ವ್ಯಥೆಯಾದೀತೆಂದು ಸೀತೆಯು ಹೇಗೆ ಹೇಳುತ್ತಿರುವಳು ?

**ಸೀತೆ**-ಛೀ ! ಛೀ ! ಹಾಗೆ ಸರ್ವಥಾ ಭಾವಿಸಬೇಡಿ ನನಗೇನೂ ವ್ಯಥೆಯಾಗಿಲ್ಲ ವೃಥಾ ನನ್ನ ಚಿಂತೆಯನ್ನು ವಹಿಸಿ ತಾವು ಮಾತ್ರ ದುಃಖಿತಾಂತಕರಣಿಗಳಾಗುವಿರಿ.

**ಲಕ್ಷ್ಮಣ**–ಅಯ್ಯೋ ! ಏನು ಪತಿವ್ರತೆಯ ಗೃಢನಿಶ್ಚಯವು ! ಸೂರ್ಯವಂಶದ ಪುಣ್ಯವು ಬಲಿಷ್ಠವೆಂದು ಇಂತಹ ವೀರಸ್ತ್ರಿಯರು ಆ ವಂಶಕ್ಕೆ ಬರುತ್ತಾರೆ. ಅಣ್ಣನೇ ಸತತವಾಗಿ ಸಂಚಾರಮಾಡುವದಕ್ಕಿಂತಲೂ ಯಾವದಾದರೊಂದು ಪುಣ್ಯಾಶ್ರಮದಲ್ಲಿ ಪರ್ಣಕುಟೀರವನ್ನು ವಿರಚಿಸಿ ಅಲ್ಲಿ ವಾಸಮಾಡುವದೇ ಲೇಸು ಹಾಗೆ ಮಾಡದಿದ್ದರೆ ಸೀತಾ ಮಾತೆಗೆ ವಿಪರೀತ ವ್ಯಥೆಯಾಗುವದು.

**ಸೀತೆ**-ಮೈದುನನೇ, ಸ್ವಾಮಿಯವರು ತಮ್ಮ ಚಿತ್ತಕ್ಕೆ ಬಂದಂತೆ ಮಾಡಲಿ. ಅವರ ಸಮಾಧಾನವೇ ನನ್ನ ಸಮಾಧಾನವು

**ರಾಮ**–ಇರಲಿ. ತಮ್ಮಾ ಲಕ್ಷ್ಮಣಾ, ಈ ಹದಿನಾಲ್ಕು ವರ್ಷಗಳನ್ನು ನಾವು ದಕ್ಷಿಣದೇಶದಲ್ಲಿ ಕಳೆಯುವದೇ ಯೋಗ್ಯವಾದೀತು ಯಾಕಂದರೆ ಅಲ್ಲಿ ಅನಾರ್ಯ ಜನಾಂಗವು ಹೆಚ್ಚಾಗಿರುವದಂತೆ. ಏನೋ ಸಮಯ ಸಾಧಿಸಿದರೆ ನಮ್ಮ ಆರ್ಯರ ಉಚ್ಚತಮ ಧಾರ್ಮಿಕ ಧ್ಯೇಯಗಳನ್ನವರಿಗುಪದೇಶಿಸಿ ಹಿಂದುಳಿದವರನ್ನು ಮುಂದಕ್ಕೆ ತರುವ ಪ್ರಯತ್ನವನ್ನು ಮಾಡುವಾ ಅದೊಂದು ಮುಖ್ಯವಾದ ಲೋಕಸೇವೆಯು

**ಲಕ್ಷ್ಮಣ**-ಅದೇನೋನಿಜ. ಜ್ಞಾನವಂತರು ಅಜ್ಞಾನಿಗಳಿಗೆ ಜ್ಞಾನದಾನ ಮಾಡಿ, ಮುಂದಕ್ಕೆ ತರಲೇಬೇಕು. ಹಾಗೆ ಮಾಡಿದ್ದರೆ ಅದೇ ಅಜ್ಞಾನಿಗಳೇ ಜಗದ ಪ್ರಗತಿಗೆ ವಿಘ್ನಕಾರಿಗಳಾಗಿ ಘಾತವನ್ನು ಮಾಡುತ್ತಾರೆ

**ರಾಮ**-ಅಂತಹ ಹಿಂದುಳಿದ ವರ್ಗಗಳಲ್ಲಿ ಕಪಿಯೆಂಬ ಕುಲದವರು ತೀರಾ ಅಧಃಪಾತವನ್ನು ಹೊಂದಿರುವರಂತೆ. ಸಾಧಾರಣವಾಗಿ ಆ ಸಾಮಾಜಿಕರು ಪಶುವರ್ಗದಲ್ಲೆಣಿಸಲ್ಪಡುತ್ತಿರುವರಂತೆ.

**ಲಕ್ಷ್ಮಣ**-ಸರಿ ಹಾಗಾದರೆ ಪಶುಕೋಟಿಯಲ್ಲವರ ಗಣನೆಯಾಗಿದ್ದ ಬಳಿಕ ತದನುಸಾರವಾಗಿ ಅವರ ಆಚಾರವಿಚಾರಗಳಾದರೂ ಇರಬಹುದು

**ರಾಮ**-ಸಂದೇಹವೇನು ? ಆ ಜನಾಂಗದವರು ಕಿಷ್ಕಿಂಧೆಯೆಂಬುದೊಂದು ರಾಜಧಾನಿಯ ನಗರವನ್ನು ಪಂಪಾಕ್ಷೇತ್ರದ ಹತ್ತಿರದಲ್ಲೇರ್ಪಡಿಸಿಕೊಂಡು ಸುತ್ತುಮುತ್ತಲಿನ ಆರ್ಯಜನಗಳಿಗೆ ವಿಶೇಷ ತೊಂದರೆಯನ್ನುಂಟು ಮಾಡುತ್ತಿರುವರಂತೆ ನಾವು ಆ ಜನಗಳ ಹತ್ತಿರದಲ್ಲಿದ್ದು ಆದಷ್ಟು ಪ್ರಯತ್ನದಿಂದ ಉತ್ತಮ ನಾಗರೀಕರನ್ನಾಗಿ ಮಾಡಿದವೆಂದರ ಒಂದು ದೊಡ್ಡದಾದ ಲೋಕಸೇವೆಯನ್ನು ಮಾಡಿದಂತಾಗುವದು. ಆದಕಾರಣ ಎಷ್ಟು ಪ್ರಯಾಸವಾದರೂ ಸಹಿಸಿ ಕಿಷ್ಕಿಂಧೆಯ ನಾಡನ್ನು ಸೇರಬೇಕು.

**ಲಕ್ಷ್ಮಣ**-ಆಗಲಿ, ತಮ್ಮ ಇಚ್ಛಾನುಸಾರ ಕಿಷ್ಕಿಂಧೆಯ ನಾಡನ್ನು ಸೇರಬೇಕಾದರೆ ನಾಶಿಕಕ್ಷೇತ್ರವನ್ನು ದಾಟಿ ಪಂಚವಟಿಯ ಮೇಲಿಂದ ಹೋಗಬೇಕಾದೀತು ?

**ರಾಮ**-ಅದೇಮಾರ್ಗವು ಅಸ್ತು. ಈ ದಿನ ಸಾಯಂಕಾಲದೊಳಗಾಗಿ ಜಾಹ್ನವಿಯನ್ನು ದಾಟಿಹೋಗುವಾ. ನಡೆಯಿರಿ.

ಚಾಲ್-ಸ್ವಾಧೀನವೇನಿದೇ

ಜನಪತಿಯಾಗುವನವನೇ ಕ್ಷಣದೊಳು ವನವನುಸೇರಿ | ಅನುಭವಿಸುವ ದೈನ್ಯವನು | ಎನಿತಿದಗಾಧಾ ॥೧॥ (ಹೋಗುವರು)

## ಪ್ರವೇಶ-ಗಂಗಾನದಿ

(ಗುಹಕನು ಜನರನ್ನು ನಾವೆಯಲ್ಲಿ ಕುಳ್ಳಿರಿಸಿಕೊಂಡು ದೋಣಿಯನ್ನು ನಡೆಸುತ್ತಿರುವನು)

**ುಹಕ**–ಮಗೂ ನರಸಾ, ಎದುರು ಹುಟ್ಟು ನಡೆಸು. ಪ್ರವಾಹವು ಬಹು ಜೋರಾಗಿದೆ

**ರಸ**-ಆಗಲಿ, ತಾತಯ್ಯಾ.

**ುಹಕ**–ಜನಗಳೇ, ಸಮನಾಗಿ ಕುಳಿತುಕೊಳ್ಳಿ ನದಿಯೊಳಗಿನ ಬಾಳ್ವೆ ಎಷ್ಟು ಜಾಗ್ರತವಿದ್ದಿತೋ ಅಷ್ಟು ನೆಟ್ಟಗೆ ಹೂಂ! ಮಗೂ, ದೇವರ ಪದವನ್ನು. ಹೇಳುತ್ತಾ ಜೋರಾಗಿ ಹುಟ್ಟು ನಡೆಸು

ಧ್ಯಾನಮಾಡೆಲೇ ಮನವೇ ಜಾನಕಿನಾಥನಾ | ಮನವೆ ‖ ಈ ನರಲೋಕದಿತಾನವತರಿಸಿದ ಆ ನಾರಾಯಣ ಮಾನವನಾಗಿ ॥ ನೀಲಮೇಘವರ್ಣ | ಆನರಪಾಲನು ವರಕರುಣಾ | ಶೀಲನಾಗಿ ದಶರಥಭೂಪಾಲನ | ಬಾಲನಾಗಿ ಮೆರೆಯುವನ್ನೈಲೋಕದಿ ॥೧॥

ಜನವೇ, ಶ್ರೀರಾಮದೇವನಂತಃಕರಣದಿಂದ ಕೆಳಗಿಳಿಯಿರಿ ಮಗೂ ನರಸಯ್ಯಾ, ಪ್ರವಾಸಿಕರಗಂಟು ಮೂಟೆಗಳನ್ನು ಧಡವಲ್ಲೊಯ್ದಿಡು

**ನೇ ಪ್ರವಾಸಿ**-ಅಯ್ಯಾ ಗುಹಕನೇ, ಇತ್ತ ಬಾ, ಇದೋ ತೆಗೆದುಕೋ.

**ಗುಹಕ**-ಇರಲಿರಲಿ, ಹೋಗಿ ಹೋಗಿ.

**೨ನೇ ಪ್ರವಾಸಿ**-ಅದೇನು? ಕಾಸು ತೆಗೆದುಕೊಳ್ಳುವದಿಲ್ಲವೇ?

**ಗುಹಕ**-ಸ್ವಾಮಿ, ನಮ್ಮ ಶ್ರೀರಾಮಚಂದ್ರ ಮಹಾರಾಜರು ಸಾಕೇತ






ಧ್ಯಾನಮಾಡಲೇ ಮನವೇ ಜಾನಕಿನಾಧನಾ ।

ಸಾಮ್ರಾಜ್ಯದ ಪಟ್ಟವನ್ನೇರಿದ ಮೂಲಕ ಈ ಮಾಸ ಮುಗಿಯುವ ತನಕ ನಾನು ಹೊಳೆಯನ್ನು ದಾಟುವ ಪ್ರವಾಸಿಕರ ಸೇವೆಯನ್ನು ಧರ್ಮಾರ್ಥವಾಗಿ ಮಾಡುತ್ತೇನೆ ಆದಕಾರಣ ಕಾಸುಗೀಸು ಏನೂ ಬೇಡ. ಹೋಗಿ ಹೋಗಿ.

**೧ನೇ ಪ್ರವಾಸಿ**-ಅಯ್ಯಾ ಗುಹಕನೇ, ರಾಮಚಂದ್ರಸ್ವಾಮಿಯವರು ಪಟ್ಟವನ್ನೇರಿದ್ದರೆ ನೀನು ಹೀಗೆ ಮಾಡಬಹುದಾಗಿತ್ತು

**ಗುಹಕ**-ಅಂದರೆ, ನಮ್ಮ ರಾಮಚಂದ್ರಸ್ವಾಮಿಯವರು ಪಟ್ಟವನ್ನೆರಲಿಲ್ಲವೆ?

**೨ನೇ ಪ್ರವಾಸಿ**-ಇಲ್ಲ, ಅವರು ತಮ್ಮ ಬಂಧುಗಳಾದ ಲಕ್ಷ್ಮಣಸ್ವಾಮಿಯವರ ಮತ್ತು ಸತಿಯರಾದ ಸೀತಾಮಾತೆಯವರೊಡನೆ ವನವನ್ನು ಸೇರಿದರಂತೆ

**ಗುಹಕ**-ಅಯ್ಯೋ ದೈವವೇ, ವನವನ್ನೇಕೆ ಸೇರಿದರು ?

**೧ನೇ ಪ್ರವಾಸಿ**-ಕೈಕಯಾ ಮಹಾರಾಣಿಯವರು ತಮ್ಮ ಮಕ್ಕಳಾದ ಭರತ ರಾಜರಿಗೆ ಪಟ್ಟಗಟ್ಟಿಸುವ ದುರಾಲೋಚನೆಯಿಂದ ದಶರಥ ಮಹಾರಾಜರನ್ನು ವಚನದಲ್ಲಿ ಬದ್ಧಮಾಡಿ ಹಾಗೆ ಮಾಡಿರುವರಂತೆ ?

**ಗುಹಕ**-ಸ್ವಾಮಿ, ಭರತರಾಜರಿಗೆ ಪಟ್ಟಗಟ್ಟಿಸುವದಾದರೆ ರಾಮಚಂದ್ರ ಮಹಾರಾಜರನ್ನು ವನಕ್ಕೆ ಕಳುಹಿಸಲೇನುಕಾರಣ ?

**೨ನೇ ಪ್ರವಾಸಿ**-ಅಯ್ಯಾ ಗುಹಕನೇ, ರಾಜ ಮನೆತನದ ಗಲಭೆಯನ್ನಾರು ಬಲ್ಲರು ?

**ಗುಹಕ**-ಇದು ನಿಜವಾದ ಸಂಗತಿಯೋ ?

**೧ನೇ ಪ್ರವಾಸಿ**-ಕೇವಲ ನಿಜವಾದ ಸಂಗತಿಯು. ಅವರಿಗಾಗಿ ಹದಿನಾಲ್ಕು

ವರ್ಷಗಳ ವನವಾಸವನ್ನು ಮುಗಿಸಿ ತಿರುಗಿಬಂದು ಶ್ರೀರಾಮಚಂದ್ರ ಮಹಾರಾಜರು ಪಟ್ಟವನ್ನೇರುವ ತನಕ ಅಯೋಧ್ಯೆಯಲ್ಲಿ ಕಾಲಿಡಲಿಕ್ಕಿಲ್ಲವೆಂದು ಹೇಳಿ ವಶಿಷ್ಠ ಮಹಾಮುನಿಗಳು ದುಃಖಿತಾಂತರಂಗಿಗಳಾಗಿ ತಮ್ಮಾಶ್ರಮದಲ್ಲಿ ಬಂದು ಉದಾಸೀನರಾಗಿ ಕುಳಿತುಬಿಟ್ಟಿದ್ದಾರ ಅವರು ಹೇಳಿದ ಸಂಗತಿಯೇ ಇದು.

**ಗುಹಕ**-ಅಯ್ಯೋ ರಾಮಯ್ಯಾ, ಕಾನನ ಸೇರಿದೆಯಾ ?

**೨ನೇ ಪ್ರವಾಸಿ**-ಅಸ್ತು. ಗುಹಕನೇ, ವಿಧಿಯ ಸಂಕಲ್ಪಕ್ಕೆ ಸರಿಯಾಗಿ ಸಕಲ ಕಾರ್ಯಗಳಾಗುವವು ನಮಗೆ ಹೊತ್ತಾಯಿತು, ಹೋಗುವೆವು ಇದೋ ನಿನ್ನ ಪಾರಿತೋಷಕವನ್ನು ತೆಗೆದುಕೊ. ( ಕೊಡುವನು )

**ನರಸ**-ತಾತಾ, ಅದೋ ಅತ್ತನೋಡು ! ಯಾರೋ ಮೂವರು ಚಿಕ್ಕ ವಯಸ್ಸಿನವರು ಬರುತ್ತಲಿದ್ದಾರ. ಇನ್ನೊಂದು ಸಾರೆ ನಾಕೆಯನ್ನು ತಿರುಗಿಸಿ ತರಬೇಕಾಗುವದೆಂದು ತೋರುತ್ತೆ.

**ಗುಹಕ**-ಮಗೂ ನರಸಯ್ಯಾ, ಮಹಾತ್ಮರ ಕಷ್ಟಗಳನ್ನು ಕಿವಿಗಳಿಂದ ಕೇಳಬಾರದಯ್ಯಾ

**ನರಸ**-ಅಪ್ಪಯ್ಯಾ, ಅರಮನೆಯಲ್ಲಿ ಕೂಡಾ ಯಂತೆಂಥಾ ಕೆಟ್ಟ ಜನಗಳು ಸೇರಿಕೊಂಡಿರುತ್ತಾರೆ ನೋಡಿ ! ಪ್ರಪಂಚದೊಳಗಿನ ಒಳ್ಳೊಳ್ಳೆ ಜನಗಳೆಲ್ಲಾ ಅರಮನೆಯಲ್ಲಿ ಸೇರಿಕೊಂಡು ರಾಜ್ಯವಾಳುತ್ತಾರೆಂದು ಇಷ್ಟು ದಿನಗಳ ತನಕ ನನ್ನ ತಿಳಿವಳಿಕೆಯಿತ್ತು. ಈಗ್ಗೆ ರಾಮದೇವರ ವನವಾಸದ ವಾರ್ತೆಯನ್ನು ಕೇಳಿ, ಅದು ಬದಲಾಯಿತು.

**ರಾಮ**-ಏನಯ್ಯಾ ಅಂಬಿಗನೇ, ನಮ್ಮನ್ನು ಆಚೆಯ ಧಡಕ್ಕೆನುಟ್ಟಿಸುವೆಯಾ ? ನಾವು ಮೂವರಿದ್ದೇವೆ.

**ಗುಹಕ**-ಆಹಹಾ ? ಏನು ಸುಂದರಮೂರ್ತಿಗಳಿವು !

**ನರಸ**-ಅಪ್ಪಯ್ಯಾ, ಇವರೆಂಥಾ ಜನಗಳೋ ? ದೇವಲೋಕದ ದೇವಗಳೆಂದು ಹೇಳುತ್ತಾರೆ ಅವರೇ ಇವರಾಗಿರಬಹುದೇನು !

**ಲಕ್ಷ್ಮಣ**-ಅಯ್ಯಾ. ನಾವೂ ನಿನ್ನಂತೆ ಮನುಷ್ಯರು ಅದಿರಲಿ, ಆಚೆ ಧಡ ನಮ್ಮನ್ನು ಮುಟ್ಟಿಸು ನೋಡುವಾ ?

**ಗುಹಕ**-ಸಂದೇಹವಿಲ್ಲ ಅವರೇ ಇವರು ದೇವಾ, ತಾವು ನಮ್ಮ ಸಾಕೇ ಸಾಮ್ರಾಜ್ಯದ ಪಟ್ಟಬಾಧ್ಯರಾದ ರಾಮಚಂದ್ರ ದೇವರಲ್ಲವೇ ?

**ರಾಮ**-ಇದು ಮೊದಲು ನೀನು ನನ್ನನ್ನೆಂದೂ ನೋಡಿದವನಲ್ಲ ಹೀಗಿರ ನನ್ನ ಪರಿಚಯವು ನಿನಗಾದದ್ದು ಹೇಗೆ ?

**ಗುಹಕ**-ದೇವಾ, ನಿಮ್ಮ ಮೂರ್ತಿಯೇ ನಿಮ್ಮ ಗುರ್ತನ್ನು ಹೇಳಿಕೊಡುತ್ತಿವದಲ್ಲವೇ ? ನೀಲಮೇಘಶಾಮ ದೇಹಕಾಂತಿಯುಳ್ಳಾತನು ರಾಚಂದ್ರದೇವನಲ್ಲದೆ ಮತ್ತಾರು ? ಕಮಲಗಳಂಥಾ ಕಣ್ಣುಗಳುಳ್ಳತನೂ, ಚಂದ್ರನಂಥಾ ಮುಖವುಳ್ಳಾತನೂ, ದಯಾದಾಕ್ಷಿಣ್ಯಾಗುಣಗಳ ಪ್ರಭೆಯುಳ್ಳಾತನೂ ಮತ್ತು ಸಕಲರಿಗೂ ಜೀವದಾಪ್ತನ ಕಾಣಿಸುತ್ತಿರುವ ಮಹಾನುಭಾವನೂ ರಾಮಚಂದ್ರದೇವನ ಮತ್ತಾರು ?

**ನರಸ**-ಅಯ್ಯಾ, ಪ್ರವಾಸಿಕನು ಹೇಳಿದಂತೆ ಇವರು ವನವಾಸಿಗಳಾಗಿವದೇ ನಿಜ

**ರಾಮ**-ಅಹುದಹುದು ! ಬಾಲಕಾ ನಾವು ಈಗ್ಗೆ ವನವಾಸಿಗಳಾಗಿರುವೆವು

**ಗುಹಕ**-ನನ್ನಯ್ಯಾ, ದಯಮಾಡಿ ಸೇವಕನಾದೀ ಗುಹಕನದೊಂ ಮಾತನ್ನು ಕೇಳುವಿರಾ ?

**ರಾಮ**-ಅದೇನು ? ಹೇಳು ನೋಡುವಾ.

**ಗುಹಕ**-ನೀವು ಮೂವರೂ ನನ್ನ ಬಡವನ ಮನೆಯಲ್ಲಿಯೇ ಇದ್ದುಬಿಡಿ. ನಾನು ನನ್ನ ಸಲುವಾಗಿ ಬೇರೊಂದು ಗುಡಿಸಿಲನ್ನು ಕಟ್ಟಿಕೊಳ್ಳುವೆನು ಮತ್ತು ನಿನ್ನ ದಯದಿಂದ ಮನೆಯಲ್ಲಿ ಹಾಲು ಹೈನವು ಸಹಾ ಇರುವವು ಕಾಳುಕಡಿಗಳಾದರೂ ಇವೆ. ಸುಖದಿಂದಿಲ್ಲಿಯೇ ಇದ್ದುಬಿಡಿ ನಿಮ್ಮ ಕಾಲಿಗೆರಗುವೆನು. ಸುಕುಮಾರವಾದೀ ದೇಹವು ಕಾನನದಲ್ಲಿ ತಿರುಗಾಡುವ ದೇಹವೇ ? ಅಯ್ಯೋ ! ದೇವನೇ, ಈ ನನ್ನಮ್ಮನನ್ನು ಕೂಡಾ ಸಂಗಡ ಕರೆದುಕೊಂಡು ಹೊರಟಿರುವಿರಲ್ಲಾ ಮಲ್ಲಿಗೆ ಹೂವಿನಂಥಾ ನನ್ನ ತಾಯಿಯು ಕಲ್ಲುಮುಳ್ಳುಗಳನ್ನು ತುಳಿಯತಕ್ಕವಳೇ ? ಆದ ಕಾರಣ ದಯಮಾಡಿ ನನ್ನ ಬಿನ್ನಪವನ್ನು ಮನ್ನಿಸಬೇಕೆಂದು ಬೇಡಿಕೊಳ್ಳುವೆನು.

**ಲಕ್ಷ್ಮಣ**-ಅಣ್ಣಾ, ನೋಡಿದೆಯಾ ? ದಯಾದಾಕ್ಷಿಣ್ಯ ಭಕ್ತಿವಿಶ್ವಾಸಾದಿ ಮಾನವೀ ಶ್ರೇಷ್ಠ ಗುಣಗಳನ್ನು ಕಾಣಬೇಕಾದರ ಇಂತಹ ಗುಡಿಸಿಲಿನಲ್ಲಿಯೇ ನಿಜವಾಗಿ ಅರಮನೆಗಳು ಆರರಿಗಳ ಮನೆಗಳು ಅಲ್ಲಿ ದೈವೀ ಸಂಪತ್ತಿಯಾದ ಶಾಂತಿಯು ಖಂಡಿತವಾಗಿರುವದಿಲ್ಲ ಇದು ಸ್ವಾನುಭವದ ಮಾತಲ್ಲವೇ ?

**ರಾಮ**-ನಿಜ; ನೀನು ಹೇಳುವದು ಕೇವಲ ನಿಜ

**ಗುಹಕ**-ಸ್ವಾಮೀ, ನನ್ನ ವಿನಂತಿಗೇನೆಂದಪ್ಪಣೆಯನ್ನು ಕೊಟ್ಟಂತಾಯಿತು?

**ನರಸ**-ದೇವಾ, ನಮ್ಮ ಮನೆಯಲ್ಲೇನೂ ಕೊರತೆಯಿಲ್ಲ ಎರಡು ಎಮ್ಮೆಗಳು ಬೇಕಾದಷ್ಟು ಹಾಲು ಕರೆಯುತ್ತವೆ. ಅಲ್ಲದೆ, ನಾಲ್ಕು ಹಸುಗಳುಂಟು ಹಿತ್ತಲವಲ್ಲಿ ನಮ್ಮಮ್ಮನು ಬೆಂಡೆಕಾಯಿ, ಚವಳಿಕಾಯಿ, ಪಡವಲ,

ಹಿಂತೆ, ಕುಂಬಳ ಮೊದಲಾದ ಗಿಡಬಳ್ಳಿಗಳನ್ನು ನೆಟ್ಟಿದ್ದಾಳೆ. ಅವೆಲ್ಲಾ ಕಾತಿರುವವು ಕಾಯಿಪಲ್ಯಗಳಿಗೇನೂ ಕೊರತೆಯಿಲ್ಲ ದಯಮಾಡಿ ಇಲ್ಲಿಯೇ ಇದ್ದುಬಿಡಿ ನನ್ನಯ್ಯಾ.

**ರಾಮ**–ಸೀತಾಲಕ್ಷ್ಮಣರೇ, ಇಂತಹ ಪ್ರೇಮವನ್ನು ನೀವೆಂದಾದರೂ ಕಂಡಿದ್ದಿರಾ ?

**ಸೀತಾ**-ಸ್ವಾಮೀ, ಅರಮನೆಗಳಲ್ಲಿ ಇಂತಹ ಗುಣಗಳಿಗವಕಾಶವಿರುವದಿಲ್ಲ ವಂದು ಕಾಣುತ್ತೆ

**ಗುಹಕ**-ಸ್ವಾಮೀ ರಾಮಚಂದ್ರದೇವರೇ, ಈ ಮಾರ್ಗವಾಗಿ ನಿತ್ಯದಲ್ಲೂ ಪ್ರವಾಸಿಕರ ಓಡಾಟ ವಿಶೇಷ. ನೌಕೆಯನ್ನು ನಡೆಸಿದ ಹಣವಾದರೂ ವಿಶೇಷ ಸಿಕ್ಕುತ್ತೆ. ಆ ಹಣದಿಂದ ನಿಮಗೆ ಬೇಕಾಗುವಷ್ಟು ಅಕ್ಕಿ, ಬೇಳೆ, ಸಕ್ಕರ ಇತ್ಯಾದಿಗಳನ್ನು ತಂದುಕೊಡುವೆನು ದಯಮಾಡಿ ನಮ್ಮ ಮನೆಯಲ್ಲಿಯೇ ಇದ್ದುಬಿಡಿ ಕಾನನದಲ್ಲಿ ಕಷ್ಟಪಡುತ್ತಾ ಸಂಚರಿಸುವದು ಬೇಡವೇಬೇಡ. ನನ್ನಂಥ ಬಡವನ ಅಂಗೈಗಳಲ್ಲರತಕ್ಕ ಚರಣಗಳಿವು; ಇವುಗಳಿಗ ಕಾನನದ ಕಲ್ಲುಮುಳ್ಳುಗಳ ತುಳಿತವು ಹೇಗಾದೀತು ?

**ರಾಮ**–ಗುಹಕಾ, ಪರಮಾವಧಿಯ ಭಕ್ತಿಯಿಂದ ನೀನು ನನ್ನನ್ನು ಬಿಗಿದು ಹಾಕಿದೆ. ಭೂಮಿಯಲ್ಲ ನಾನೆಲ್ಲಿದ್ದರೂ ಮನವು ಮಾತ್ರ ನಿನ್ನ ಮನೆಯಲ್ಲಿಯೇ ಇರುವದು. ಕಾರಣ ಮರುಗಬೇಡ ವನವಾಸದಲ್ಲಾದರೂ ದಕ್ಷಿಣದೇಶದಲ್ಲ ನಮಗೊಂದು ಮಹತ್ವದ ಕಾರ್ಯವನ್ನು ಮಾಡತಕ್ಕದ್ದಿದೆ.

**ಗುಹಕ**–ಏನೀಗ್ಗೆ ತಾವು ದಕ್ಷಿಣದೇಶಕ್ಕೆ ಹೋಗುವಿರಾ ?

**ರಾಮ**-ಅಹುದು, ಕಿಷ್ಕಿಂಧೆಯ ಪ್ರದೇಶದಲ್ಲಿರತಕ್ಕ ಸಂಕಲ್ಪವನ್ನು ಮಾಡಿ ಕೊಂಡಿರುವೆವು

**ನರಸ**-ದೇವಾ, ಕಿಷ್ಕಿಂಧೆಯ ಪ್ರದೇಶದಲ್ಲಿ ಬಹು ಕೆಟ್ಟ ಕಪಿಗಳಿರುವವಂತೆ ಅವು ಮನುಷ್ಯರನ್ನು ಕಂಡರೆ ಹರಿದು ತಿನ್ನುವವಂತೆ ಅಂಥಾ ದೇಶವಲ್ಲ ವಾಸಮಾಡುವದಕ್ಕಾಗಿ ಹೋಗುವಿರಾ ?

**ರಾಮ**-ಮಗೂ, ನೀನು ಹೇಳುವದೆಲ್ಲ ಕೇಳಿಕೆಯ ಸುದ್ದಿಯು ನಿಜವಾಗಿ ಅಲ್ಲಿರತಕ್ಕವರು ಕಪಿಗಳಲ್ಲ ಅವರು ನಮ್ಮಂಥಾ ಮನುಷ್ಯರೆ! ಅವರ ಆರ್ಯ ಸಂಸ್ಕೃತಿಯ ಸಂಸ್ಕಾರವಿಲ್ಲದ್ದಕ್ಕೆ ಅವರಿಗಂತಹ ಪಶುವೃತ್ತಿಯು ಬಂದಿರುವುದು ಅಂತಹ ಅಧಃಪಾತವನ್ನು ಹೊಂದಿರುವ ದೇಶಬಂಧು ಗಳನ್ನು ಮುಂದಕ್ಕೆ ತರುವದು ನಮ್ಮ ಕರ್ತವ್ಯವಲ್ಲವೇ ?

**ನರಸ**-ತಾವು ಹೇಳುವ ಮಾತುಗಳೇ ನನಗೆ ತಿಳಿಯುವು. ತಾತಯ್ಯಾ, ಹೇಗಾ ದರೂ ಮಾಡಿ ನಮ್ಮ ದೇವರನ್ನು ಮನೆಯಲ್ಲಿರಿಸಿಕೊಳ್ಳಯ್ಯಾ, ಬಿಡ ಬೇಡ

**ಗುಹಕ**-ಪ್ರಭೋ, ತಮಗೇನೂ ತೊಂದರೆಯಾಗದಂತೆ ನಾನು ನಡೆದು ಕೊಳ್ಳುವೆನು ನೋಡಿ, ಕೆಲಕಾಲವಾದರೂ ತಾವು ಈ ಸೇವಕನ ಸೇವ ಯನ್ನು ಕೊಳ್ಳದೇ ಹೋಗಬೇಡಿರೆಂದು ಬೇಡಿಕೊಳ್ಳುವೆನು.

**ರಾಮ**-ಗುಹಕನೇ, ವ್ಯಸನಪಡಬೇಡ ಸಮಯುವನ್ನು ಸಾಧಿಸಿ, ಕೆಲವು ದಿನ ಗಳ ಮಟ್ಟಿಗೆ ನಿನ್ನಾತಿಥ್ಯವನ್ನು ಕೈಕೊಳ್ಳಲಿಕ್ಕೆ ಬರುವೆನು. ಈಗ್ಗೆ ಮಾತ್ರ ನಮ್ಮನ್ನು ಹೋಗಗೊಡು, ಆತಂಕವನ್ನು ಮಾಡಬೇಡ.

**ಗುಹಕ**-ಉಪಾಯವಿಲ್ಲ. ದೇವನೇ. ನೀನೆಲ್ಲಿದ್ದರೂ ಈ ಬಡವನನ್ನು ಮಾತ್ರ ಮರೆಯಬಾರದು.

**ಸೀತಾ**-ಗುಹಕನೇ, ನಾನು ಆಗಾಗ್ಗೆ ಸ್ವಾಮಿಗೆ ನಿನ್ನ ನೆನಪುಕೊಡುವೆನು; ಚಿಂತಿಸಬೇಡ

**ಗುಹಕ**-ಸ್ವಾಮಿ, ತಮ್ಮನ್ನು ಆಚೆಯ ದಂಡೆಗೆ ಒಯ್ದು ಮುಟ್ಟಿಸುವೆನು. ಆದರ ನನ್ನದೊಂದು ಕಡೆಯ ಮಾತನ್ನು ಲಾಲಿಬೇಕು ಸಿಟ್ಟಾಗ ಬಾರದು.

**ರಾಮ**-ಅದಾವದು ?

**ಗುಹಕ**-ನಿಮ್ಮ ಚರಣಧೂಳಿಯು ತಗುಲಿದ ಮಾತ್ರಕ್ಕೆ ಕಲ್ಲುಬಂಡೆಗಳು ಹೋಗಿ ಕನ್ನೆಯಾಗುವದಂತೆ. ಹಾಗೇನಾದರೂ ನನ್ನ ನೌಕೆಯಾದರೆ ನಾನೆಲ್ಲ ಗೋಳಾಡಲಿ !

**ಲಕ್ಷ್ಮಣ**-ಗುಹಕನೆ, ಅದು ಅಕಸ್ಮಾತ್ತಾದ ಸಂಗತಿಯು ಪದೇಪದೇ, ಹಾಗಾಗುವದುಂಟೆ ?

**ನರಸ**-ನಮಗೆ ವಿಶ್ವಾಸವಿಲ್ಲಾ. ಯಾರುಬಲ್ಲರು ? ನಾವೆ ಹೋಗಿ ನಾರಿ ಯಾದರೆ ನಮ್ಮ ಹೊಟ್ಟೆ ತುಂಬಿಕೊಳ್ಳುವ ಉದ್ಯೋಗವೇ ನಿಂತು ಹೋಗುವದಲ್ಲಾ.

**ರಾಮ**-ಅದಕ್ಕೇನು ಮಾಡಬೇಕೆನ್ನುವೆ ?

**ಗುಹಕ**-ತಮ್ಮ ಮೂವರ ಕಾಲುಗಳನ್ನು ಚನ್ನಾಗಿ ತೊಳೆದು ಆ ನಂತರದಲ್ಲಿ ನೌಕೆಯಲ್ಲಿ ಕುಳ್ಳಿರಿಸುವೆನು

**ರಾಮ**-ಆಗಲಿ, ನಿನ್ನಿಚ್ಛೆಯಂತೆ ಮಾಡಿಕೋ, ಹೇಗಾದರೂ ಪೈಲ ತೀರವನ್ನು ಕಂಡರೆ ಸಾಕು.

**ಗುಹಕ**-ಹಾಗಾದರೆ ಮೂವರೂ ಈ ಕಟ್ಟೆಯ ಮೇಲೆ ಕುಳಿತುಕೊಳ್ಳಿರಿ.

(ಮೂವರೂ ಕೂಡುವರು) ಮಗೂ ನರಸಯ್ಯಾ, ನೀನು ನೀರು ತುಂಬಿ ಕೊಂಡು ಬಾ, ಚನ್ನಾಗಿ ಈ ಮೂವರ ಕಾಲುಗಳನ್ನು ತೊಳೆಯುವೆನು (ನರಸ ನೀರು ತರುವನು)

**ಲಕ್ಷ್ಮಣ**–ಅಣ್ಣಾ, ಈ ಗುಹಕನಂಥ ಭಾಗ್ಯಶಾಲಿಯು ಈ ಲೋಕದಲ್ಲ ಮತ್ತಾವನು; ಸಾಕ್ಷಾತ್ ನಿನ್ನ ಚರಣಗಳನ್ನು ತೊಳೆಯುತ್ತಿರುವನು?

**ರಾಮ**–ಲಕ್ಷ್ಮಣನೇ, ಅದೇನು ಮಹತ್ವ! ಭಾವನೆಯಂತೆ ಫಲವು ದೊರೆಯ ಬೇಕೆನ್ನುವದು ಈಶ್ವರೀ ಸಂಕೇತವೆ ಹೂಂ! ಸಾಗಲಿ, ಗುಹಕಾ–

**ಗುಹಕ**–ನರಸಯ್ಯಾ, ನೀರು ಹಾಕು. ನಾನು ಕಾಲು ತೊಳೆಯುವೆನು

ಚಾಲ್-ರಾಮುಲಾಲೀಸೀತಾರಾಮುಲಾಲೀ

ಧನ್ಯನಾದೇನಾನು ಧನ್ಯನಾದೇ ॥ಪ॥ ಜನ್ಮವನ್ನು ತಾಳಿಬಂದು ಧನ್ಯನಾದೇ ॥ ಮುತ್ತಿನಂಥ ಲಕ್ಷ್ಮೀದೇವಿಯೊತ್ತುವಂಥಾಪಾದ । ಇತ್ತನಾನು ತೊಳೆಯುತಿರುವೆ ಭಾಗ್ಯವಂತಾ ॥೧॥ ತುಚ್ಛವೆಲ್ಲಾ ಭೋಗಭಾಗ್ಯಾವಿವರವುಂಟೆ ರಾಮ ॥ ವತ್ಸಲತೆಯನು ತೋರಿದನು ತಂದೆ ॥೨॥ ಎಂತುಬಣ್ಣಿಸಲಿ ಮನಕಾದಮೋದಾ ॥ ದೇವಾ ನಿಂತುಹೋಯಿತಯ್ಯಾ ಜನ್ಮಸತ್ಯಮೋಹಾ ॥೩॥

**ರಾಮ**–ತಡೆಯೆನು ತಡೆಯೆನು; ಈ ದಿವ್ಯಭಕ್ತಿಯನ್ನು ನೋಡಿ ಬರುತ್ತಿರುವಾನಂದ ಬಾಷ್ಪಗಳಾವೇಗವನ್ನು ತಡೆಯೆನು. ಇರಲಿ, ಗುಹಕಾ, ಮನಸ್ಸಿನ ಸಮಾಧಾನವಾಯಿತೇ? ಇನ್ನು ಮೇಲಾದರೂ ನಮ್ಮನ್ನು ಪೈಲತೀರಕ್ಕೆ ಒಯ್ದು ಮುಟ್ಟಿಸುವೆಯೋ ಇಲ್ಲವೋ?

**ಗುಹಕ**–ಸ್ವಾಮಿ, ಇನ್ನು ಮೇಲಾತಂಕವನ್ನು ಮಾಡೆನು. ಕುಳಿತುಕೊಳ್ಳಿರಿ ನೌಕೆಯಲ್ಲಿ. ನರಸಯ್ಯಾ, ನೌಕೆಯನ್ನು ತಿರುವಿ ನಿಲ್ಲಿಸು ಮಗೂ.



೧೦೦ ಧನ್ಯನಾದೇನಾನು । ಧನ್ಯನಾದೇರಾಮಾ ॥

**ರಾಮ**–ಸೀತಾಲಕ್ಷ್ಮಣರೇ, ನಡೆಯಿರಿ, ಜಾಹ್ನವಿಯನ್ನು ದಾಟುವಾ

**ಗುಹಕ**–ದೇವಾ, ಕುಳಿತುಕೊಳ್ಳಿ ನೌಕೆಯಲ್ಲಿ ನರಸಯ್ಯಾ, ಹುಟ್ಟುನಡೆಸು. ನೋಡಿದೆಯಾ ? ಮಗೂ, ಭವಸಾಗರವನ್ನು ದಾಟಿಸುವ ನಾವಿಕನಿಗೆ ನಾನು ನಾವಿಕನಾಗುವೆನು !

**ನರಸ**–ತಾತಯ್ಯಾ, ಎಂತಹ ದೊಡ್ಡವರಾದರೂ ಅವರಿಗೆ ಸಣ್ಣವರ ಸಹಾಯವು ಬೇಕೇಬೇಕು.

**ರಾಮ**-ಗುಹಕನೇ, ಸಾವಕಾಶವೇಕೆ ?

**ಗುಹಕ**–ಇದೋ ದೇವಾ, ನೌಕೆಯು ಸಾಗಿತು.

ಸವರ

ಧ್ಯಾನಪಸಪಾಪಶೇ ಪಾಸಪೇ ಜಾನಕಿನಾಥನಾ ॥

( ಎಂದು ಹಾಡುತ್ತಾ ನೌಕೆಯನ್ನು ನಡೆಸುವನು )

## ಪ್ರವೇಶ— ಭರತ.

**ಭರತ**–

ಆನಾ ನೀಪಸಪಾನನೇತ್ರಯುಗದೊಳ್ । ರಾರಾಜಿಸುತ್ತಿರ್ಪ್ಪದು ।
ಕಾರುಣ್ಯಾಂಬುಪರಿಪೂರ್ಣವಾಗಿ ಪೊಗಪೋಳ್ । ಸ್ವಾಸಾದವುಾಜಿಂಪ್ಪೆಯೋಳ್ ॥೧॥

ಅಣ್ಣನೇ, ನಿನ್ನನ್ನೆಲ್ಲಿ ಹುಡುಕಲಿ ? ಯಾರಿಂದ ನಿನ್ನ ವಾರ್ತೆಯನ್ನು ತಿಳಿದುಕೊಳ್ಳಲಿ ? ಅಯ್ಯೋ ! ಸಿಂಹಾಸನದಲ್ಲಿ ಕುಳಿತು ಛತ್ರಚಾಮರಗಳನ್ನು ಹಿಡಿಸಿಕೊಳ್ಳುವ ನೀನು ವನವಾಸದ ವಿಪತ್ತುಗಳಿಗೆ ಗುರಿಯಾದೆಯಾ !

**ಸುಮಂತ**–ಭಗವಾನ್, ಅದೋ ನೋಡಿದಿರಾ ! ಭರತಮಹಾರಾಜರಲ್ಲವೇ ಅವರು ?

**ವಶಿಷ್ಠ**-ಅಹುದಹುದು; ಭರತಕುಮಾರನೇ ಅವನು. ಧೇನುವನ್ನು ಕಳೆದು ಕೊಂಡ ವತ್ಸದಂತೆ ರಾಮಭದ್ರನ ಸಲುವಾಗಿ ಹೇಗೆ ವನವನ ಸಂಚರಿಸುತ್ತಿರುವನು ? ಅಯ್ಯೋ ! ಸಾಕೇತರಾಜಪುತ್ರರಪೇನು ವನವಾಸವಿದು ? ಸುಮಂತರೇ, ಅವನನ್ನು ನಿಲ್ಲಿಸಿ.

**ಸುಮಂತ**-ಭರತ ಮಹಾರಾಜರೇ, ತಡೆಯಬೇಕು. ಭಗವಾನ್ ವಶಿಷ್ಠ ಮಹಾಮುನಿಗಳು ತಮ್ಮನ್ನು ಕಾಣುವದಕ್ಕಾಗಿ ದಯಪಾಲಿಸಿದ್ದಾರೆ

**ವಶಿಷ್ಠ**-ಭರತಕುಮಾರನೇ, ಜಯಶೀಲನಾಗು.

**ಭರತ**-ಭಗವಾನ್, ಅಣ್ಣನೆಲ್ಲಿ? ದಯವಿಟ್ಟು ತೋರಿಸುವಿರಾ ? ಆತನದೇನು ಗತಿಯಾಯಿತು ?

**ವಶಿಷ್ಠ**-ಭರತಕುಮಾರಾ, ಕೃತಕರ್ಮ ಪಶ್ಚಾತ್ತಾಪದಿಂದ ದೀನಳಾದ ನಿನ್ನ ತಾಯಿಯು-

**ಭರತ**-ಅಲ್ಲ; ಅವಳು ನನ್ನ ತಾಯಿಯಲ್ಲ

**ವಶಿಷ್ಠ**-ಆಗಲಿ, ಪಶ್ಚಾತ್ತಾಪದಿಂದ ದೀನಳಾದವಳು ಶ್ರೀರಾಮಭದ್ರನನ್ನು ಹೇಗಾದರೂ ಮಾಡಿ ಕರೆದುಕೊಂಡು ಬರುವದಕ್ಕಾಗಿ ನಮಗೆ ವಿಜ್ಞಾಪಿಸಿಕೊಂಡಿದ್ದಾಳೆ ಆದಕಾರಣ ನಾವು ಸಹಾ ಅವನ ಶೋಧಾರ್ಥವಾಗಿಯೇ ಹೊರಟಿರುವೆವು.

**ಭರತ**-ಸರಿಸರಿ, ಸರ್ವನಾಶವಾದ ಮೇಲೆ ಸದ್ಬುದ್ಧಿಯು ಬಂದಿತೇ ? ಇರಲಿ, ಭಗವಾನರೇ, ರಾಮಭದ್ರನು ನನಗೆಲ್ಲಿ ಸಿಕ್ಕಾನು ?

**ವಶಿಷ್ಠ**-ಅದನ್ನು ಹೇಗೆ ಹೇಳಲಿ? ನಡೆ ಶೋಧವನ್ನಂತೂ ಮಾಡಿ ನೋಡುವ

**ದೂತ**-ಮಹಾರಾಜರ ಜಯಜಯಕಾರವು. ಶ್ರೀರಾಮಭದ್ರ ಮಹಾರಾಜರು

ಮಹಾದೇವಿಯವರಾದ ಸೀತಾದೇವಿಯವರ ಸಮೇತರಾಗಿಯೂ ಮತ್ತು ಲಕ್ಷ್ಮಣ ಮಹಾರಾಜರ ಸಮೇತರಾಗಿಯೂ ಸ್ವಲ್ಪ ದಿನಗಳ ಹಿಂದೆ ಜಾಹ್ನವಿಯನ್ನು ದಾಟಿ ಚಿತ್ರಕೂಟಪರ್ವತಾಭಿಮುಖವಾಗಿ ಹೋದರೆಂದು ಅವರನ್ನು ಜಾಹ್ನವೀ ದಾಟಿಸಿದ ಗುಹಕನೆಂಬ ಧೀವರನು ಹೇಳಿದನು.

**ವಶಿಷ್ಠ**–ಸರೀ, ಹಾಗಾದರೆ ಅವನ ಪರಿಮುಖದಿಂದಲೇ ಪರಿಷ್ಕಾರವನ್ನು ಮಾಡಿಕೊಳ್ಳುವ ನಡೆಯಿರಿ.

**ಸುಮಂತ**-(ಹಿಂದಿರುಗಿ) ಭಗವಾನರೇ, ನೋಡಿದಿರಾ ? ಇಡೀ ಸಾಕೇತ ನಗರವೇ ಶ್ರೀರಾಮದರ್ಶನಕ್ಕಾಗಿ ಹೊರಟಿರುವದು. ಏನಿದನುಪಮವಾದ ರಾಜನಿಷ್ಠೆಯು ! ಯುವರಾಜ ಪದದಲ್ಲಿರುವಾಗಲೇ ಇಂತಹ ಪ್ರಜಾಜನಚಿತ್ತವನ್ನು ಹರಣಮಾಡಿದ ಶ್ರೀರಾಮಚಂದ್ರ ಮಹಾರಾಜರು ದೇವರಲ್ಲದೆ ಮತ್ತಾರು ?

**ಉಭಯರು**–ಸಂದೇಹವೇನು ?

**ಭರತ**– ಚಾಲ್-ಇನಕುಲತಿಲಕಾ

ಅಪತಪಿಸಿರುವಾ | ಭಾವಜಕೈಯ್ಯನು | ಭುವಿತಲದೇ ॥ ಅಭಿಷುಪಲಾತನಾ | ನಿರುಪಮಗುಣಗಳ | ಪರ್ಶಿಸುವರು ಮೂರ್ಖರು ಜಗದೇ | ಸುರತರುವನು ಧಿಃಖರಿಸಲು ಜಾಲಿಯಾ | ಮರವೆಂದದರಾ ಗೌರವ ಪೋಪುದೇ ? ॥೧॥

**ನಾಗರೀಕರು**–

ಕಂಪಾಗಯೋ ಶಿರಿರಾಮಚಂದ್ರಜೀ ಕಂಹಾಗಯೋ ಶಿರಿರಾಮ ॥ ಕೌನ ದಿಶಾಸೇಗಾಅಜಿ ಹಮಕೂ | ಓಹಸಬ ಸಾಕೇತನಕಾಪ್ಯಾರಾ ॥೧॥

**ನಾರಾಯಣದಾಸ**-ಅಜಿ ಓ ವಶಿಷ್ಟಗುರುಮಾರಾಜ್, ಹಮಾರಾ ರಾಮರಾಜಾ ಖೈಂಗಯೋ ? ಬತಾವೋನಾಜಿ.

**ಸುಮಂತ**-ಶಿಷ್ಟರೇ, ನಾವಾವರೂ ಅವರನ್ನು ಶೋಧಿಸುತ್ತಲೇ ಹೊರಟಿರುವೆವು.

**ನಾರಾಯಣದಾಸ**-ಅರೇ! ಏತೋ ಹಮಾರೇ ಛೋಟೇ ಭರತಮಹಾರಾಜ್ ಕ್ಯಾ ಏಭೀ ಬನವಾಸನಿಕಲೇ! (ಹಣೆಯನ್ನಪ್ಪಳಿಸಿಕೊಂಡು) ಅರೇ ಬಾಲಾಜೀ, ಕ್ಯಾ ಗಜಬ್ಬ ಹಮಾರೆ ರಾಜಕಾ ತಮಾಮ್ ಸತ್ಯಾನಾಶ ಹೋಗಿಯಾ? ಜಹಾಂಸೇ ಆಯೀ ಓ ಸೈತಾನೀ ಕೈಕಿಯಾರಾನೀ

**ವಶಿಷ್ಠ**-ಪೌರವರೇ, ವಿಧಿಸಂಕಲ್ಪಾನುಸಾರವಾಗಿ ಸಕಲ ಕಾರ್ಯಗಳಾಗುವವು ನಡೆಯಿರಿ; ಶ್ರೀರಾಮಭದ್ರನನ್ನು ಶೋಧಿಸುವಾ (ಸಕಲರೂ ಹೋಗುವರು)

## ಪ್ರವೇಶ.

**ನರಸ**-ಅಪ್ಪಯ್ಯಾ, ಇದೇನು? ಅನ್ನಬಿಟ್ಟರಿ, ನೀರುಬಿಟ್ಟರಿ; ಹೀಗಾದರೆ ನೀವು ಜೀವಿಸುವದೆಂತು? ಹಾಗಾದರೇನು ಅಪ್ಪಯ್ಯಾ, ನೀವೀಗ ಅನ್ನನೀರುಗಳನ್ನು ಮುಟ್ಟುವದಿಲ್ಲವೇ?

**ಗುಹಕ**-ಇಲ್ಲ ಮಗೂ; ನನಗನ್ನಬೇಡಾ, ನೀರುಬೇಡಾ, ನಿದ್ರೆಬೇಡಾ, ಯಾವ್ಯಾವದೂ ಬೇಡಾ ಹೀಗೆಯೇ ರಾಮಯ್ಯನ ಧ್ಯಾನಮಾಡುತ್ತ ಮಾಡುತ್ತ ಪರಲೋಕಕ್ಕೆ ಹೋಗುವೆನು.

**ನರಸ**-ಆ ಪರಲೋಕಕ್ಕೆ ಹೋಗಿ ಎಷ್ಟು ದಿನಗಳಲ್ಲಿ ತಿರುಗಿ ಬರುವಿರಪ್ಪಯ್ಯಾ?

**ಗುಹಕ**-(ಸ್ವಗತ) ಅಯ್ಯೋ ಬಾಲಬುದ್ಧಿಗೆ ಪರಲೋಕದ ಕಲ್ಪನೆಯೇ ಇಲ್ಲ (ಪ್ರಕಾಶ) ಮಗೂ, ಒಂದಾವರ್ತಿ ಪರಲೋಕಕ್ಕೆ ಹೋದವರು ತಿರುಗಿ ಬರುವದೇ ಇಲ್ಲ

**ನರಸ**–ಹಾಗಾದರೇ ನನ್ನನ್ನೂ ಅಮ್ಮನನ್ನೂ ಏತಕ್ಕೆ ಇಲ್ಲಿ ಬಿಟ್ಟು ಹೋಗು ವಿರಿ ? ನಮ್ಮನ್ನೂ ಸಹಾ ಆ ಪರಲೋಕಕ್ಕೆ ಕರೆದುಕೊಂಡು ಹೋಗಿ ಆ ಪರಲೋಕವನ್ನು ನಾವಾದರೂ ನೋಡಿಲ್ಲ—

**ದೂತ**-ಅಯ್ಯಾ ಗುಹಕನೇ, ಅದೋ ನೋಡುನೋಡು ! ಭಗವಾನ್ ವಶಿಷ್ಠ ಮಹಾಮುನಿಗಳೂ ಭರತಮಹಾರಾಜರೂ ಮತ್ತು ಸುಮಂತರಾಯರೂ ನಿನ್ನ ಕಡೆಗೇನೇ ಹೊರಟಿರುವರು

**ಗುಹಕ**–ಅಹಹಾ ! ನಿಜವೇ ಮಗೂ ನರಸಯ್ಯಾ, ಮಹಾನುಭಾವರಿಗೆ ಕುಳಿತುಕೊಳ್ಳುವದಕ್ಕಾಗಿ ಏನಾದರೂ ಹಾಕು ತೀವ್ರ (ಹಾಕುವನು) (ಸಕಲರೂ ಬರುವರು ಗುಹಕನು ಉತ್ಥಾಪನ ಕೊಡುವನು ) ದೇವಾ, ದಯವಿಟ್ಟು ಕುಳಿತುಕೊಳ್ಳಿ. ಬಡವನಿಗೇನೆಂದಪ್ಪಣೆಯಾಯಿತು ?

**ವಶಿಷ್ಠ**–ಗುಹಕನೇ, ಶ್ರೀರಾಮಭದ್ರ ಸೀತಾಲಕ್ಷ್ಮಣರು ಯಾವ ಮಾರ್ಗ ವಾಗಿ ಯಾವ ದಿಕ್ಕಿಗ ಹೋದರು ?

**ಗುಹಕ**–ದೇವಾ, ಕೆಲವು ದಿನಗಳ ಹಿಂದೆ ಮೂವರೂ ಇಲ್ಲಿಗೆ ಬಂದಿದ್ದರು ನನ್ನ ಮನೆಯಲ್ಲಿಯೇ ಇರುವದಕ್ಕಾಗಿ ಬಹು ಪರಿಯಿಂದ ಬೇಡಿ ಕೊಂಡೆನು ಆದರೆ ಆ ಮಹಾನುಭಾವರು ನನ್ನ ಮಾತುಗಳನ್ನು ಕೇಳ ಲಿಲ್ಲ. ಆಗ್ಗೆ ಉಪಾಯಗಾಣದೆ ಹೊಳೆಯನ್ನು ದಾಟಿಸಿದೆನು. ಆನಂತರ ಅವರು ಚಿತ್ರಕೂಟ ಪರ್ವತಾಭಿಮುಖವಾಗಿ ಹೋದರು

**ಸುಮಂತಾ**–ದೇವಾ, ಚಿತ್ರಕೂಟ ಪರ್ವತದ ಮೇಲೆ ತಪೋನಿಧಿಗಳಾದ ಜಾಬಾಲಿ ಮೊದಲಾದ ಮಹರ್ಷಿಗಳ ಆಶ್ರಮಗಳಿವೆ. ಅಲ್ಲಿಯೇ ಪ್ರಾಯಶಃ ನಮ್ಮ ಸತ್ಯಸಂಧರಾದ ರಾಮಭದ್ರಮಹಾರಾಜರು ವಾಸಿ ಸುತ್ತಿರಬಹುದು.

**ಭರತ**-ಹಾಗಾದರೆ ನಡೆಯಿರಿ. ತಡವೇಕೆ? ಚಿತ್ರಕೂಟಕ್ಕೆ ಹೋಗುವಾ.

**ನರಸ**-ಅಪ್ಪಯ್ಯಾ, ನಮ್ಮ ರಾಮಯ್ಯ ದೇವರನ್ನು ತಿರುಗಿ ಕರದುಕೊಂಡು ಬರುವದಕ್ಕಾಗಿ ಹೇಳಿರಯ್ಯಾ

**ಸಕಲರೂ**-ಅದಕ್ಕಾಗಿಯೇ ಹೊರಟಿದ್ದೇವೆ

**ನರಸ**-ಬಹು ಭೇಷ್! ಹಾಗಾದರೆ ದೇವರಿಗಿಂದು ನಾನು ಹಣ್ಣುಕಾಯಿ ಮಾಡಿಸುತ್ತೇನೆ.

**ವಶಿಷ್ಠ**-ಹಾಗಾದರೆ ಗುಹಕನೇ, ನಮ್ಮೆಲ್ಲರನ್ನು ಆಚೇ ಧಡಕ್ಕೆ ಮುಟ್ಟಿಸು ಆದಷ್ಟು ಬೇಗ ಶ್ರೀರಾಮಪ್ರಭುವನ್ನು ಕಾಣುವಾ.

**ಗುಹಕ**-ದೇವಾ, ನನಗೂ ನಿಮ್ಮಗೂಡ ಬರಲಪ್ಪಣೆಯನ್ನು ಕೊಡಬೇಕು,

**ಸುಮಂತ**-ನೀನು ನಮ್ಮಗೂಡ ಬಂದರೆ ಇಲ್ಲಿ ನದಿಯನ್ನು ದಾಟುವ ಪ್ರಯಾಣಿಕರಿಗೆ ತೊಂದರಯಾದೀತಲ್ಲವೆ ?

**ಗುಹಕ**-ನನ್ನ ಮಗನಾದ ಈ ನರಸಯ್ಯನು ಆ ಕೆಲಸವನ್ನು ಸುಲಭವಾಗಿ ಮಾಡುವನು. ಅದರ ಚಿಂತೆಯಿಲ್ಲ

**ಎಲ್ಲರೂ**-ಹಾಗಾದರೆ ನಡೆಯಿರಿ ಹೋಗುವಾ.

**ಗುಹಕ**-ನರಸಯ್ಯಾ, ನೌಕೆಯನ್ನು ಬಿಚ್ಚಿ ನೀರಿನಲ್ಲಿ ಎಳೆ ದೇವಾ, ನಡೆಯಬೇಕು. (ಸಕಲರೂ ಹೋಗುವರು)

## ಪ್ರವೇಶ.

**ರಾಮ**-ತಮ್ಮನೇ, ಈ ಚಿತ್ರಕೂಟದಲ್ಲಿ ದಿನಗಳು ಎಷ್ಟು ಆನಂದದಲ್ಲಿ ಸಾಗಿವೆ! ನಾಗರೀಕರಿಗೆ ಈ ಆನಂದಾನುಭವವು ಹೇಗಾಗಬೇಕು ?

**ಲಕ್ಷ್ಮಣ**–ಇಂತಹ ಸ್ವರ್ಗೀಯಾನಂದವನ್ನು ಅನುಭವಿಸಲಿಕ್ಕೆ ಅರ್ಹರಾದವರು ತಪೋನಿಧಿಗಳೇ, ಕೃತ್ರಿಮಾನಂದಗಳಿಗೆ ಲುಬ್ಧರಾಗುವ ಅರಸಿಕ ನಾಗರೀಕರಿಗೆ ಇದು ನಿರಸವಾಗಿಯೇ ತೋರಬಹುದು ಹಾಗಿಲ್ಲದಿದ್ದರೆ ಇಂತಹ ಸ್ಥಳಗಳಿಗೆ ಸದಾ ಅವರು ಬರುತ್ತಿದ್ದರು

**ಸೀತೆ**–(ಆತುರದಿಂದ ಬಂದು) ಮಹಾಸ್ವಾಮಿ, ಅದೋ ನೋಡಿರಿ! ಎಷ್ಟೋ ಜನಗಳು ಪರ್ವತದ ಮೇಲೆ ಬರುತ್ತಿರುವರು. ಪುಣ್ಯಾಶ್ರಮವಾಸಿಗಳಾದ ತಪಸ್ವಿಗಳಂತೆ ಅವರು ಕಾಣಿಸುವದಿಲ್ಲ

**ರಾಮ** ನಿಜ ಯಾರೋ ಬೇರೆ ಜನಗಳಿದ್ದಾರೆ ತಮ್ಮಾ, ಸಿದ್ಧನಿರು; ಅವರು ಹತ್ತಿರಕ್ಕೆ ಬಂದು ನಿರುಪದ್ರವಿಗಳೆಂದು ನಿರ್ಣಯವಾಗುವತನಕ ಧನುರ್ಬಾಣಗಳ ಸಿದ್ಧತೆಯಿರಲಿ.

**ಭರತ**–

### ವೃತ್ತ

ಸ್ವೈರಸ್ವಾಪ್ಯತದಾಸದಾ ಹೃದಯದೋಳ್ | ಸದ್ಭಕ್ತಕಲ್ಯಾಣದಾ |
ಪಾರಾವಾರವಿಚಾರವೇ ತ್ವರಿತದೀ ಆ ರಾಮನಂ ತೋರಿರೀ ॥೧॥

**ಸೀತೆ**-ಸ್ವಾಮಿ, ಇದು ಭರತಮೈದುನನ ರೋದನಧ್ವನಿಯಾಗಿದೆ

**ಲಕ್ಷ್ಮಣ**–ನಿಶ್ಚಯ; ಅದೋ ? ಅವನೇ ಭರತನು ಸಂಗಡ ಭಗವಾನ್ ವಶಿಷ್ಠ ಮಹಾ ಮುನಿಗಳೂ, ಮತ್ತು ಸುಮಂತರಾಯನೂ, ಅಲ್ಲದೆ ಇತರ ನಾಗರೀಕರೂ ಬಂದಿದ್ದಾರೆ.

**ಸೀತೆ**-ಅದೋ ನೋಡಿ, ನಮ್ಮನ್ನು ಗಂಗಾಪಾರುಮಾಡಿದ ಗುಹಕನಾದರೂ ಅವರ ಸಂಗಡವೇ ಇರುವನು. ಭರತಮೈದುನನಿಗೆ ಅವನೇ ನಮ್ಮ ವೃತ್ತಾಂತವನ್ನರುಹಿರಬಹುದು.

**ಲಕ್ಷ್ಮಣ**-ಅಣ್ಣನೇ, ಕೈಕಯಾ ಮಾತೆಯ ವಿಚಾರಗಳಿಗೆ ಭರತನು ಒಪ್ಪಿಕೊಂಡಿಲ್ಲವೆಂದು ಕಾಣುತ್ತೆ.

**ರಾಮ**–ಬಾಲಬುದ್ಧಿಗನುಸರಿಸಿ ಏನೇನು ಕೋಲಾಹಲವನ್ನು ಮಾಡಿದನೋ ಏನೋ ?

**ದೂತ**-ಮಹಾರಾಜರೇ, ಹೀಗೆ ದಯಪಾಲಿಸಬೇಕು

**ಭರತ**-(ಓಡಿಬಂದು ಅಪ್ಪಿಕೊಂಡು) ಅಹಹಾ ! ಧನ್ಯನಾದೆನು.

ಚಾಲ್-ಬಿಲ್ಹಾರೀ। ಝಂಪೆತಾಳ

ಕಂಡೆಕೋದಂಡರಾಮನ ದಿವ್ಯಚರಣಾ । ಕಂಡೆನೂಪುಂಪದ್ವೈತ್ಯರ
ಗಂಡನೆನ್ನಪನ ॥ ಕಂಡೆನೂಕೌಸಲ್ಯಸಂಜಾತ ಸುಗುಣಗಣ । ಮಂಡಿತನಚಂ
ದಾಶುಕುಲತಿಲಕನಾ । ಕಂಡೆನೂ ಪುಂಡರೀಕಾಕ್ಷ ರಘುನಾಥನಾ । ಖಂಡಿ
ತಚಲಾಪುಂಡಲದಿ ಪರಮಾಥನ್ಸನಾ ॥೧॥

ಅಣ್ಣನೇ ನನ್ನಮೇಲೆ ನೀನಿಷ್ಟೊಂದೇತಕ್ಕೆ ಕುಪಿತನಾದೆ? ನನ್ನಿಂದೇನ ಪರಾಧವಾಗಿರುವದು

**ರಾಮ**–ಭರತಾ, ಯಾರಿಂದೇನೂ ಅಪರಾಧವಾಗಿಲ್ಲ. ಅಲ್ಲದೆ ನಿನ್ನ ಮೇಲೆ ಸಹಾ ನಾನು ಕೋಪಗೊಂಡಿಲ್ಲ ಕೇವಲ ಪಿತೃವಚನವನ್ನು ಪೂರ್ಣ ಮಾಡುವದಕ್ಕಾಗಿ ವನವಾಸಿಯಾದೆನಲ್ಲದೆ ಬೇರೆಯಿಲ್ಲ.

**ಭರತ**-ಅಣ್ಣನಾದ ಲಕ್ಷ್ಮಣನನ್ನು ಸಂಗಡ ಕರೆದುಕೊಂಡು ಬಂದೆ. ನನ್ನನೇತಕ್ಕೆ ನಿನ್ನಗೂಡಕೊಳ್ಳಲಿಲ್ಲಾ? ಏತಕ್ಕೆ ನನ್ನನ್ನು ದೂರಮಾಡುವೆ?

**ಲಕ್ಷ್ಮಣ**-ತಮ್ಮನೇ, ನಿನ್ನನ್ನು ನಾವು ಸಂಗಡ ಕರೆದುಕೊಂಡು ಬಂದಿದ್ದರ ಕೈಕಯಾ ಮಾತೆಯ ವಾಂಛಿತವು ಹೇಗೆ ಪೂರ್ಣವಾದೀತು? ಅವಳು ಪಿತನಿಂದ ಎರಡು ವರಗಳನ್ನು ಪಡೆದುಕೊಂಡಿದ್ದಾಳೆ. ಒಂದು ವರ

ದಿಂದ ಅಣ್ಣನಿಗೆ ವನವಾಸವು ಮತ್ತೊಂದು ವರದಿಂದ ನಿನಗೆ ಸಿಂಹಾಸನವು.

**ಸುಮಂತ**--ಈ ಸಂಗತಿಯನ್ನು ಮೊದಲೇ ಅರಿಕೆಮಾಡಿಕೊಂಡಿದ್ದೇವೆ

**ಭರತ**-ಆ ಸಿಂಹಾಸನವು ಸುಟ್ಟಿತು. ಅಣ್ಣಾ, ಸಿಂಹಾಸನದೊಡೆಯನಾದ ನೀನು ವನವಾಸದ ಕಷ್ಟಗಳನ್ನು ಭೋಗಿಸುತ್ತಿರುವಾಗ್ಗೆ ನಾನು ಛತ್ರ ಚಾಮರಗಳನ್ನು ಹಿಡಿಸಿಕೊಂಡು ರಾಜವೈಭವದಲ್ಲಿ ಮೆರೆಯಲೇ ? ಅಣ್ಣಾ, ನನ್ನನ್ನಷ್ಟು ನೀಚಕೋಟಿಯವನೆಂದು ಭಾವಿಸಿದೆಯಾ ? ಷಡ್ಗುಣೈಶ್ವರ್ಯ ಸಂಪನ್ನನೂ, ಪ್ರಜಾಜನರ ಭಕ್ತಿವಿಶ್ವಾಸಗಳ ಕೇಂದ್ರನೂ ಅಲ್ಲದೆ ನನ್ನ ಪಿತೃಸಮಾನನಾದ ನಿನ್ನನ್ನು ನಾನಗಲಿರುವೆನೇ ?

**ರಾಮ**-ತಮ್ಮನೇ, ಹಿಂಗೆ ನೀನು ಆಗ್ರಹವನ್ನು ಹಿಡಿಯಬೇಡ ಮಾತೆಯ ವಾಂಛಿತವನ್ನು ಪೂರ್ಣಮಾಡುವದು ಮಕ್ಕಳಾದ ನಮ್ಮ ಧರ್ಮವು ನಡೆ, ಹಿಂತಿರುಗು.

**ಭರತ**-(ಅಳುತ್ತ) ಅಣ್ಣಾ ರಾಮಭದ್ರಾ, ಏತಕ್ಕೆ ನನ್ನನ್ನು ದೂರಮಾಡುವೆ? ದಶರಥ ತಾತನ ಪಶ್ಚಾತ್ ನೀನಲ್ಲವೇ ನನ್ನ ಪಿತೃಸ್ವರೂಪನು ? ಉಭಯರಾಧಾರವಿಲ್ಲದೆ ಬಾಲಕನಾದ ನಾನು ಸಾಕೇತದಲ್ಲಿ ಜೀವಿಸಲೆಂತು ?

**ರಾಮ**—ಏನು ? ಹೀಗೇನು ಹೇಳುವೆ ? ನನ್ನಾಧಾರವಿಲ್ಲದಿದ್ದರೇನಾಯಿತು ? ನಿನಗೆ ದಶರಥ ತಾತನ ಆಧಾರವಿರುವದಲ್ಲಾ.

**ಸುಮಂತ**-ಭಗವಾನ್, ಹಿರೇ ಮಹಾರಾಜರು ದಿವಂಗತರಾದ ಸಂಗತಿಯು ರಾಮಭದ್ರಮಹಾರಾಜರಿಗೆ ಗೊತ್ತಾಗಿಲ್ಲವೆಂದು ತೋರುತ್ತೆ

**ಭರತ**—ಅಣ್ಣಾ, ನೀನು ಕೇಳಿಲ್ಲವೆಂದು ಕಾಣುತ್ತೆ. ನೀನು ವನವಾಸಿಯಾದುದಕ್ಕೆ ಮುಪ್ಪಿನಕಾಲವಲ್ಲ!ನಿನ್ನಂಥ ಕುಮಾರನ ವಿಯೋಗದುಃಖವನ್ನು

ಸಹಿಸುವ ಶಕ್ತಿಯು ಇಲ್ಲದ್ದರಿಂದ ದಶರಥ ತಾತನು ಆದೇ ಪುತ್ರ ವಿಯೋಗದುಃಖದಲ್ಲಿಯೇ ದಿವಂಗತನಾದನು ನಾಲ್ಕು ಜನ ಮಕ್ಕಳಿದ್ದರೂ ಮರಣ ಸಮಯಕ್ಕೆ ಆ ಮಹಾನುಭಾವನ ಹತ್ತಿರದಲ್ಲಾರೂ ಇಲ್ಲದಂತಾಯಿತು (ಸಕಲರೂ ಕಣ್ಣೀರು ಸುರಿಸುತ್ತ ಸ್ತಬ್ಧರಾಗಿ ನಿಲ್ಲುವರು.

**ರಾಮ**–ತಾತನು ಹೋದನೇ ? ಬಾಲಕರಾದ ನಮ್ಮಗಳಾಧಾರನು ದಿವಂಗತನಾದನೇ ? ಸಾಕೇತ ಸಾಮ್ರಾಜ್ಯದ ಪ್ರಜಾವತ್ಸಲನಾದ ಧರ್ಮವಂತ ಭೂಪಾಲಕನು ಕಣ್ಣುಗಳಿಗೆ ಕಾಣಿಸದಂತೆ ಹೋದನೇ ? ಚತುರ್ವಿಧ ಪುರುಷಾರ್ಥಕಗಳನ್ನು ಸಾಧಿಸುವ ಸನ್ಮಾರ್ಗ ದರ್ಶಕ ಗುರುವರ್ಯನು ಗುಪ್ತನಾದನೇ ? ಹಾಯ್ ದಶರಥಮಹಾನುಭಾವಾ, ಈ ಲೋಕದ ನಿನ್ನ ಮನೋವಾಂಛಿತಗಳೇನೂ ಕೊನೆಗಾಣಲಿಲ್ಲವಲ್ಲಾ ಪ್ರಬದ್ಧರಾದ ನಾಲ್ಕುಜನ ಮಕ್ಕಳು ರಾಜ್ಯಸೂತ್ರಗಳನ್ನು ತಮ್ಮ ಕೈಯಲ್ಲತೆಗೆದುಕೊಂಡು ಧರ್ಮದಿಂದಲೂ ದಕ್ಷತೆಯಿಂದಲೂ ರಾಜ್ಯಭಾರವನ್ನು ಮಾಡುತ್ತಾ ಒಬ್ಬರಿಗೊಬ್ಬರು ಸಹಕಾರಿಗಳಾಗಿ ಸಮಾನತೆಯಿಂದಿರುವದನ್ನು ನೋಡಿ ವಾರ್ಧಿಕ್ಯದ ದಿನಗಳನ್ನಾನಂದದಲ್ಲಿ ಕಳಯಬೇಕೆಂದು ಮಾಡಿದ ಮನೋರಾಜ್ಯದ ಪರ್ಯವಸಾನವು ಇಷ್ಟು ವಿಪರೀತವಾಯಿತೆ

**ಗುಹಕ**–ಅಪ್ಪಯ್ಯಾ, ಅಳಬೇಡಿ ಬ್ರಹ್ಮನ ಬರವಣಿಗೆಯಂತೆ ಎಲ್ಲಾ ಕಾರ್ಯಗಳಾಗುವದಲ್ಲವೇ ? ಜ್ಞಾನಿಗಳಾದ ನಿಮ್ಮಂಥವರು ಹೀಗೆ ಶೋಕವಲ್ಲಿ ಮುಳುಗಿ ಸಾಮಾನ್ಯಜನಗಳಂತೆ ಪ್ರಲಾಪಿಸುತ್ತ ಕುಳಿತುಕೊಂಡರೆ ಪ್ರಪಂಚವು ಹೇಗೆ ನಡಿಯಬೇಕು ?

**ಸೀತೆ**–ಗುಹಕನೇ, ನನ್ನ ಮಾವಂದಿರು ಸಾಮಾನ್ಯರಿದ್ದಿಲ್ಲ.

**ಚಾಲ್-ಪರಮಪಾವನೇ**

ಅವತರಿಸಿದಾತಾಭವದಿಶಿವಸಾರ್ವಭೌಮಾ ‖ ದಿನಿಜತತಿಸಂಭ್ರಮಾ ‖

ಶಿಪೆಯಂತರಾತ್ಮಾ। ವರ್ಣಿಸಲಿನಾ । ಗುಣಗಳನಿತೂ । ರಸನೆಯಿಂದಾ । ನೃಪ
ಲಲಾಮಾ ॥೧॥

**ಗುಹಕ**-ನಿಜವಾಗಿ ಅಮ್ಮನವರೇ, ಅವರು ಸಾಕ್ಷಾತ್ ಕೈಲಾಸನಾಥನ ಅವತಾರಿಗಳಂತೇ ಶ್ರೀರಾಮಚಂದ್ರಮಹಾರಾಜರಂಥ ನವರತ್ನಗಳಿಗೆ ಜನ್ಮವನ್ನು ಕೊಟ್ಟಿದ್ದಾರೆ.

**ರಾಮ**–ಇರಲಿ; ಬಾಂಧವರೇ, ಕಾಲಚಕ್ರದ ಕಡೆಗೆ ದೃಷ್ಟಿಯನ್ನು ಕೊಟ್ಟು ಮನಸ್ಸಿನ ಸಮಾಧಾನವನ್ನು ಮಾಡಿಗೊಳ್ಳಲೇಬೇಕು ಮತ್ತು ಸೂರ್ಯವಂಶ ಪರಂಪರೆಗನುಸರಿಸಿ ಸಾಕೇತ ಸಾಮ್ರಾಜ್ಯದ ಗೌರವವನ್ನು ಕಾಪಾಡಿಕೊಳ್ಳಬೇಕು. ತಸ್ಮಾತ್ ಭರತನೇ, ನೀನು ಜನನಿಯ ಅಭಿಲಾಷೆಯಂತೆ ಸಾಕೇತನಗರದಾಧಿಪತ್ಯವನ್ನು ಕೈಕೊಂಡು ಸುಖದಿಂದ ಕಾಲಹರಣ ಮಾಡು ನಡೆ

**ಭರತ**- ಚಾಲ್-ರಾಗ-ಹಿಂಡೋರದಾದರಾ

ಭೋರಘುವರವರಕರುಣನಿಧಿಯೆ ದೂರಮಾಡಬೇಪಪೆನ್ನನು ॥ ನಿರುತ
ನಿನ್ನ ಚರಣಕಮಲ ಬಳಿಯೊಳಿರುವೆನು ॥ ಕ್ರೂರಜನರ ಸಹವಾಸದೊ । ಳಿರುವ
ಘೋರಶಿಕ್ಷೆಯನ್ನು । ನಿರಪರಾಧಿಯಾದ ಎನಗೆ ವಿಧಿಸುವೇತಕೇ ॥೧॥

**ಲಕ್ಷ್ಮಣ**-ತಮ್ಮಾ ಭರತಾ ನಾವು ವನವಾಸದ ವಿಪತ್ತಿಗೆ ಗುರಿಯಾದೆವೆಂದು ನೀನು ಹೀಗೆ ಸಾಮ್ರಾಜ್ಯದ ವಿಷಯದಲ್ಲಿ ಔದಾಸೀನ್ಯವನ್ನು ತಾಳಬೇಡ. ನೋಡು, ವಿಚಾರಮಾಡಿನೋಡು. ನೀನು ನಮ್ಮಗೂಡ ವನವನ್ನು ಸೇರಿದೆಯಾದರೆ ಪಿತೃವಚನಕ್ಕೆ ಬಾಧೆಬರುವದು ಯಾಕಂದರೆ ಕೈಕಯಾ ಮಾತೆಯ ಕೋರಿಕೆಯು ನಿನಗೆ ರಾಜ್ಯಾ; ಮತ್ತೂ ನಮಗೆ ವನವಾಸವಾಗಬೇಕೆಂತಲೇ ಇರುವದು.

**ವಶಿಷ್ಠ**-ಅದೆಲ್ಲ ಇರಲಿ, ರಾಮಭದ್ರಾ, ನಿನ್ನ ತಾಯಿಯಾದ ಕೈಕಯಾ

ರಾಣಿಗೆ ಕೃತಕರ್ಮದ ಪಶ್ಚಾತ್ತಾಪವಾದುದರಿಂದ ಅವಳು ನಿಮ್ಮೆಲ್ಲ
ರನ್ನೂ ಕರೆದುಕೊಂಡು ಬರುವದಕ್ಕಾಗಿ ನಮ್ಮನ್ನು ಕಳುಹಿಸಿದ್ದಾಳೆ

**ರಾಮ**–ಗುರುಗಳೇ, ಕ್ಷಮಿಸಿ ನಾನು ಹದಿನಾಲ್ಕು ವರ್ಷ ವನದಲ್ಲಿ ಕಳೆದ
ರೇನೇ ಪಿತೃವಚನವನ್ನು ಸತ್ಯಮಾಡಿದಂತಾಗುವದು ಆದಕಾರಣ
ದಯವಿಟ್ಟು ನಗರಕ್ಕೆ ನಡೆಯಲಾಜ್ಞೆಯನ್ನು ಕೊಡಬೇಡಿರೆಂದು ಬೇಡಿ
ಕೊಳ್ಳುವೆನು.

**ಸುಮಂತ**–ಪೂಜ್ಯರು ಆಲೋಚಿಸಿವಂತೆಯೇ ರಾಮಭದ್ರಮಹಾರಾಜರಿಂದ
ಉತ್ತರವು ದೊರೆಯಿತು

**ರಾಮ**-ತಾವೇ ಪರ್ಯಾಲೋಚಿಸಿ; ನಗರಕ್ಕೆ ಬಂದು ಪಟ್ಟನೇರಿದರೂ
ವಚನಭಂಗವಾಗುವದು. ಮತ್ತೂ ಭರತನು ನಮ್ಮಗೂಡ ವನಕ್ಕೆ
ಬಂದರೂ ವಚನಭಂಗವಾಗುವದು ಆದಕಾರಣ ಭರತನನ್ನು ನಗರಕ್ಕೆ
ಕರೆದುಕೊಂಡು ಹೋಗಬೇಕು.

**ಭರತ**–ಅಣ್ಣಾ, ನೀನಿಲ್ಲದೆ ನಾನು ಯಾವಕಾಲಕ್ಕೂ ನಗರಪ್ರವೇಶ ಮಾಡು
ವದಿಲ್ಲ.

**ರಾಮ**-ಹಾಗಾಗಲಿಕ್ಕೆ ಮಾರ್ಗವಿಲ್ಲ ಯಾಕಂದರೆ ಸ್ವರ್ಗಸ್ಥನಾದ ತಾತನಿಗೆ
ಸದ್ಗತಿಯಾಗಬೇಕಾದರೆ ಮಕ್ಕಳಾದ ನಾವು ಆತನ ವಚನವನ್ನು ಸತ್ಯ
ಮಾಡಬೇಕು

**ವಶಿಷ್ಠ**–ಜ್ಞಾನಿಯಾದ ನಿನ್ನ ವಚನಕ್ಕೆ ಪ್ರತಿಯುಂಟೆ? ನಿನ್ನಂಥ ಸತ್ಯ
ಸಂಧನಿಗೆ ಕಾನನವಾಸವು ಬಂದಿರುವದೆಂವ ಬಳಿಕ ಇದರಲ್ಲೇನಾದರೂ
ನಾರಾಯಣನ ಸತ್ಯಸಂಲ್ಪಕವಿರಬಹುದಾಗಿ ಕಾಣುತ್ತೆ. ಆಗಲಿ, ಭರತ
ಕುಮಾರಾ, ಪ್ರತ್ಯುತ್ತರವನ್ನು ಕೊಡದೆ ನಿನ್ನ ಪಿತೃಸಮಾನನಾದ
ಅಣ್ಣನ ಹೇಳಿಕೆಯಂತೆ ವರ್ತಿಸು.

**ಭರತ**-ಗುರುಗಳೇ, ಯದ್ಯಪಿ ನಾನು ನಗರಕ್ಕೆ ಬಂದರೂ ಪಟ್ಟವನ್ನೇರುವ ದಿಲ್ಲ. ಯಾಕಂದರೆ ನಾನು ಕನಿಷ್ಠನಲ್ಲವೇ? ಜೇಷ್ಠಪುತ್ರನಿರುವಾಗ್ಗೆ ಕನಿಷ್ಠನು ಪಟ್ಟವೇರುವದೆಂತು ?

**ವಶಿಷ್ಠ**-ನಿಜ; ನೀನು ಹೇಳುವದು ಕೇವಲ ನಿಜ

**ಸುಮಂತ**-ಹಾಗಾದರೆ ಮುಂದೇನಾಲೋಚನೆ ?

**ವಶಿಷ್ಠ**-ಭರತಾ, ಹೀಗೆಮಾಡು. ನೀನು ರಾಮಭದ್ರನ ಪ್ರತಿನಿಧಿಯಾಗಿ ರಾಜ್ಯಭಾರವನ್ನು ನಡೆಸು.

**ಭರತ**-ಹಾಗಾದರೇ, ಅಣ್ಣಾ.

ಚಾಲ್-ದಾನಿತೋಂತನನಿಸನಿಸ

ದಯಪಾಲಿಸುಪಾದುಕೆಗಳನೂ | ಜಲಜನೇತ್ರ ಸುಲಲಿತಾಂಗ ಸದಯ
ಗುಣಾಲವಾಲಬಾಲನೊಳು ಕರುಣಿಸಿಜವ ॥ ಇಡುತಲಿ ಸಿಂಹಾಸನದಿಯುವುಗ
ಳನು ಅಡಿಯೊಳ್ ನಿಲ್ಲುತೆ ರಾಜ್ಯಭಾರವಾ | ನಡೆಸುವೆಧರ್ಮದಿಂದಲಾಗ್ರಜಾ

**ವಶಿಷ್ಠ, ಸುಮಂತ**- ಕೇವಲ ಯೋಗ್ಯ.

**ರಾಮ**-ಹಾಗಾದರೆ ಇದೋ ತೆಗೆದುಕೋ. (ಪಾದುಕೆಗಳನ್ನು ಕೊಡುವನು)

**ವಶಿಷ್ಠ**-ರಾಮಭದ್ರಾ, ವನದಲ್ಲಿ ನಿಮ್ಮನ್ನೂ ನಗರದಲ್ಲಿ ಭರತನನ್ನೂ ಸುಖ ರೂಪವಾಗಿ ಭಗವಂತನು ಸಂರಕ್ಷಿಸಲಿ. ಅಸ್ತು; ಮಂತ್ರಿಗಳೇ, ಆದಷ್ಟು ಜಾಗ್ರತೆಯಾಗಿ ನಗರಕ್ಕೆ ಹೋಗಿ ರಾಮಪಾದುಕಾಪಟ್ಟಾಭಿಷೇಕ ವನ್ನು ಜರುಗಿಸುವಾ.

**ಸುಮಂತ**-ಹಾಗೆ ಮಾಡಿದರೇನೇ ಸಾಕೇತ ಸಾಮ್ರಾಜ್ಯದಲ್ಲಿ ನೆಮ್ಮದಿ ಯುಂಟಾದೀತು.

**ಭರತ**-ಅಣ್ಣಾ, ಹದಿನಾಲ್ಕು ವರ್ಷವು ಯಾವ ಮಿತಿಗೆ ಪೂರ್ಣವಾಗುವದೋ ಅಂದೇ ನೀನು ನನಗೆ ದರ್ಶನವನ್ನು ಕೊಡಲೇಬೇಕು. ಹಾಗೆ ಮಾಡದಿದ್ದರೆ ಅದೇ ತಕ್ಷಣವೇ ನಾನು ಅಗ್ನಿಪ್ರವೇಶ ಮಾಡುವೆನು.

**ರಾಮ**-ನಿಶ್ಚಯವಾಗಿ ಬರುವೆನು; ಚಿಂತಿಸಬೇಡ ಹೋಗು

**ವಶಿಷ್ಠ**-ರಾಮಭದ್ರಾ, ಹೋಗಿಬರುವೆವು. (ಮೂವರೂ ನಮಿಸುವರು) ಚಿರಂಜೀವಿಗಳಾಗಿ ಬಾಳಿರಿ (ಸಕಲರೂ ರಾಮಚಂದ್ರನಿಗೆ ನಮಿಸಿ ಕಣ್ಣೀರು ಸುರಿಸುತ್ತ ಹೋಗುವರು)

## ಪ್ರವೇಶ.

**ಡಂಗುರದವ**-ಪೌರವರೇ, ಕೇಳಿಕೇಳಿ ಪಿತೃವಚನವನ್ನು ಸತ್ಯಮಾಡುವದಕ್ಕೂ ರವಿಕುಲದ ನಿಷ್ಕಲಂಕ ಕೀರ್ತಿಯನ್ನು ಕಾಪಾಡಿಕೊಳ್ಳುವದಕ್ಕೂ ನಮ್ಮ ಸಾಕೇತ ಪಟ್ಟಬಾಧ್ಯರಾದ ಶ್ರೀರಾಮಭದ್ರ ಮಹಾರಾಜರು ಹದಿನಾಲ್ಕು ವರ್ಷಗಳ ವನವಾಸವನ್ನು ಸ್ವೀಕರಿಸಿದ ಸಂಗತಿಯು ಸರ್ವಶ್ರುತವಾದದ್ದು. ಈಗ್ಗೆ ನಿಸ್ವಾರ್ಥಿಗಳಾದ ಭರತಮಹಾರಾಜರು ರಾಮಚಂದ್ರ ಮಹಾಸ್ವಾಮಿಗಳವರ ಪಾದುಕೆಗಳನ್ನು ಪಡೆದುಕೊಂಡು ಬಂದಿರುವರು ಮತ್ತು ಅವುಗಳಿಗೇನೇ ಪಟ್ಟಗಟ್ಟಿ ತಾವು ಶ್ರೀರಾಮಚಂದ್ರಮಹಾಸ್ವಾಮಿಗಳವರ ಪ್ರತಿನಿಧಿಗಳಾಗಿ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಳ್ಳುವರು. ಅವರ ಆಜ್ಞೆಯನ್ನು ಪಾಲಿಸಿದರೆ ತಮ್ಮಾಜ್ಞೆಯನ್ನು ಪಾಲಿಸಿದಂತಾಗುವದೆಂದು ರಾಜಾಧಿರಾಜ ರಾಮಚಂದ್ರ ಮಹಾರಾಜರ ಸಂದೇಶವಿದೆ ರಾಜಾಜ್ಞೆಗೆ ಯಾರೂ ಭಂಗವನ್ನುಂಟುಮಾಡಲಾಗದು. ಭದ್ರ.

## ಪ್ರವೇಶ.

(ಶ್ರೀರಾಮ-ಪಾದುಕೆಗಳಿಗೆ ಪಟ್ಟಾಭಿಷೇಕವಾಗುವದು)